Vol - 12 August 2014 Issue No. 08 ₹ 10.00/-





Messengers of Peace

ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

Karnataka Scout & Guide

Monthly News Magazine

# GONE HOME



**Smt. M.G. Bopaiah, Former State Commissioner (Guides), Former Vice-President of Bharat Scouts and Guides, Karnataka & National Headquarters, New Delhi And Trustee of Karnatake State Bharat Scouts and Guides, Karnataka Passed Away on 15th August 2014 at Mercara at the age of 97 years.**



*A Meeting was arranged at State Headquarters, Bangalore on 25-08-2014 to pay our Humble Tributes to the Departed Soul of Smt. M.G. Bopaiah Respected and Distinguished Leader of the Movement. Sri P.G.R. Sindhia, Former Minister & Vice-President of the State Association spoke on the occasion. Sri Kondajji B. Shanmukhappa State chief Commissioner, Sri T. Prabhakar, State Treasurer, Sri M.A. Challaiah, JSS(S) & Smt. B.V. Ramalatha, JSS(G) are also seen. A number of Scout-Guide Leaders present on the occassion spoke about the qualities of Head & Heart of Smt. M.G. Bopaiah.*




ದಿ. 20-07-2014ರಂದು 84 ವಸಂತಗಳನ್ನು ಪೂರೈಸಿದ ಶ್ರೀ ಗೊ.ರು. ಚನ್ನಬಸಪ್ಪ, ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಹಾಗೂ ಅಧ್ಯಕ್ಷರು ಪ್ರಕಟಣಾ ವಿಭಾಗ, ಭಾ.ಸ್ಕೌ&ಗೈ ಕರ್ನಾಟಕ ಹಾಗೂ ಧರ್ಮಪತ್ನಿ ಶ್ರೀಮತಿ ಮಲ್ಲಮ್ಮ ಇವರನ್ನು ಬೆಂಗಳೂರಿನ ರವೀಂದ್ರ ಕಲಾ ಕ್ಷೇತ್ರದಲ್ಲಿ ಜರುಗಿದ ಸಾರ್ವಜನಿಕ ಸಮಾರಂಭದಲ್ಲಿ ಸನ್ಮಾನಿಸಲಾಯಿತು. ಚಿತ್ರದಲ್ಲಿ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು, ಸುತ್ತೂರು ಶ್ರೀ ಕ್ಷೇತ್ರ, ಜಗದ್ಗುರು ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀ ತರಳಬಾಳು ಬೃಹನ್ಮಠ, ಸಿರಿಗೆರೆ ಮತ್ತು ಸನ್ಮಾನ್ಯ ಸಚಿವರುಗಳು, ಮಾನ್ಯ ಮಾಜಿ ಸಚಿವರು ಹಾಗು ಮಾನ್ಯ ಸಂಸದರು ಮತ್ತು ಗಣ್ಯಮಾನ್ಯ ಅತಿಥಿಗಳನ್ನು ಕಾಣಬಹುದು.




ಅಭಿನಂದನಾ ಸಮಾರಂಭದಲ್ಲಿ ಶ್ರೀ ಡಿ.ವಿ. ಸದಾನಂದಗೌಡ, ಮಾನ್ಯ ಕೇಂದ್ರ ರೈಲ್ವೆ ಸಚಿವರು ಹಾಗು ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಗೊ.ರು.ಚ. ಚಿತ್ರ ಸಂಪುಟ ಬಿಡುಗಡೆ ಮಾಡುತ್ತಿರುವುದು.



ದಿ. 15-08-2014ರಂದು ಬಾಗಲಕೋಟೆಯ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ತೃತೀಯ ಸ್ಥಾನ ಪಡೆದ ಗೈಡ್ಸ್ ತಂಡದ ನಾಯಕಿಗೆ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಮಾಹಿತಿ ತಂತ್ರಜ್ಞಾನ ಸಚಿವರಾದ ಮಾನ್ಯ ಶ್ರೀ ಎಸ್.ಆರ್. ಪಾಟೀಲ್ ನೆನಪಿನ ಕಾಣಿಕೆ ಮತ್ತು ಪ್ರಶಸ್ತಿಪತ್ರ ನೀಡಿ ಗೌರವಿಸಿದರು.



ದಿ. 15.8.2014ರಂದು ರಾಯಚೂರು ಮಹಾತ್ಮಗಾಂಧಿ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ಪ್ರಥಮ ಸ್ಥಾನ ಪಡೆದ ಗೈಡ್ಸ್ ತಂಡದ ನಾಯಕಿ ಕು.ಜೀನತ್ ಇವರಿಗೆ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ವೈದ್ಯಕೀಯ ಶಿಕ್ಷಣ ಸಚಿವರಾದ ಮಾನ್ಯ ಡಾ॥ ಶರಣ ಪ್ರಕಾಶ್ ಪಾಟೀಲ್ ರವರು ಪ್ರಶಸ್ತಿ ಪತ್ರ ಹಾಗೂ ನೆನಪಿನ ಕಾಣಿಕೆ ನೀಡಿ ಗೌರವಿಸಿದರು.

## *EDITORIAL............*

"Shaping a Common Future" was the theme of recently concluded 40th World Scout Conference in Slovenia and The Bharat Scouts & Guides took part befittingly.

The theme leads to new vision for world scouting – vision 2023, the youth forum before the conference was booster for the agenda to discuss and decide the common future to suit every youth where ever he or she hails from and what ever ethical/ class / creed / colour he or she may belong.

Further the theme adds a word 'Shaping', we are the movement which shapes the character / personality of every young person who enters our fold. The common future of shaping should be value based with innovative concepts and life survival skills to face the emerging competitive world.

Youth come to us if we show them the path which leads them to real success and shaping their life with common future, in which they live with equal rights, peace, and progress for all and also prosper together.

In India the responsibility is more on every leader who directly deals with youth rather than leaders of adults. The unit leaders should march ahead with vision and mission in which youth has pivoted role not sort of parasitic role. Even if the unit leaders have generation gap with his unit youth, he can overcome gap by changing own attitudes and developing skills to adopt new knowledge.

Now a day's options are many for young leaders and youth to explore and venture the Scouting/ Guiding. What they need is spirit of accepting the challenges. The challenge is to provide common future by shaping concrete plan and vision to achieve purpose of Scouting/Guiding.

*A boy carries out suggestions more wholeheartedly when he understands their aim.* -- **Robert Baden-Powell**

Now friends lets understand basics of Scouting/ Guiding with the quote of Lord BP and do our job well by limiting ourselves. Happy Scouting / Guiding .

*M.A. KHALID*
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ.........................

ಆತ್ಮೀಯರೇ,

**ರಾಜ್ಯದ ಎಲ್ಲಾ ಸ್ಕೌಟ್-ಗೈಡ್, ರೋವರ್-ರೇಂಜರ್ ಬಂಧುಗಳಿಗೆ, ಅಭಿಮಾನಿಗಳಿಗೆ, ಪೋಷಕರುಗಳಿಗೆ ಗೌರಿ-ಗಣೇಶ ಹಬ್ಬದ ಹಾರ್ದಿಕ ಶುಭಾಶಯಗಳು.**

96 ವರ್ಷಗಳ ಸಾರ್ಥಕ ಜೀವನ ಸಾಗಿಸಿದ ನಮ್ಮೆಲ್ಲರ ನೆಚ್ಚಿನ ಹಿರಿಯ ನಾಯಕಿ-ಮಾತೃ ಸಮಾನರಾದ ಶ್ರೀಮತಿ ಎಂ..ಜಿ. ಬೋಪಯ್ಯನವರು 15 ಆಗಸ್ಟ್‌ರಂದು ಮಡಕೇರಿಯಲ್ಲಿ ನಿಧನ ಹೊಂದಿರುತ್ತಾರೆ.

ಎಂಟು ದಶಕಗಳ ಕಾಲ ಸಾಮಾಜಿಕ-ಸಾರ್ವಜನಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸಿದ್ದ ಶ್ರೀಮತಿ ಬೋಪಯ್ಯನವರು ಮಡಕೇರಿ ಜಿಲ್ಲೆ-ಕರ್ನಾಟಕ ರಾಜ್ಯ-ಭಾರತದ ಸ್ಕೌಟಿಂಗ್-ಗೈಡಿಂಗ್‌ನಲ್ಲಿ ತಮ್ಮ ವೈಯಕ್ತಿಕ ಚಿಂತನೆ – ಮಾರ್ಗದರ್ಶನಗಳಿಂದ ಎಲ್ಲರ ಪ್ರೀತಿ-ಗೌರವಕ್ಕೆ ಪಾತ್ರರಾಗಿದ್ದರು.

ಸ್ಕೌಟ್-ಗೈಡ್ ಚಳವಳಿಯಲ್ಲದೆ ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆ, ಸಮಾಜ ಕಲ್ಯಾಣ ಮಂಡಳಿ, ಸಹಕಾರ ಚಳವಳಿ ಹಾಗೂ ಹಲವಾರು ಸಾಮಾಜಿಕ, ಶೈಕ್ಷಣಿಕ ಸಂಘ-ಸಂಸ್ಥೆಗಳಲ್ಲೂ ಸಕ್ರಿಯವಾಗಿ ಭಾಗವಹಿಸಿ ಇತರರಿಗೆ ಮಾರ್ಗದರ್ಶಕರಾಗಿದ್ದರು. ಮಡಕೇರಿಯಲ್ಲಿ ಜಿಲ್ಲಾ ಗೈಡ್ ಆಯುಕ್ತರಾಗಿ ಮೈಸೂರು ವಿಭಾಗದ ಸಹಾಯಕ ರಾಜ್ಯ ಗೈಡ್ಸ್ ಆಯುಕ್ತರಾಗಿ, ರಾಜ್ಯ ಗೈಡ್ಸ್ ಆಯುಕ್ತರಾಗಿ, ರಾಜ್ಯ ಮತ್ತು ರಾಷ್ಟ್ರೀಯ ಸಂಸ್ಥೆಗಳ ಉಪಾಧ್ಯಕ್ಷಿಣಿಯಾಗಿ ಹಾಗೂ ಕರ್ನಾಟಕ ಭಾರತ್ ಸ್ಕೌಟ್ಸ್-ಗೈಡ್ಸ್‌ನ ಟ್ರಸ್ಟಿಯಾಗಿ, ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಗೆ ತಮ್ಮ ವಿಶಿಷ್ಟ ಕೊಡುಗೆಯನ್ನು ನೀಡಿರುತ್ತಾರೆ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಕುಟುಂಬದವರಿಗೆ ಆಗಿರುವ ಅತೀವ ದುಃಖವನ್ನು ಭರಿಸುವ ಶಕ್ತಿಯನ್ನು ಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ರಾಜ್ಯದ ಹಿರಿಯ ಅನುಭವಿ ತರಬೇತಿ ನಾಯಕ-ನಾಯಕಿಯರಲ್ಲಿ, ಸ್ಕೌಟರ್-ಗೈಡರ್‌ಗಳಲ್ಲಿ ನನ್ನ ಮನವಿ. ಸ್ಕೌಟ್-ಗೈಡ್ ಚಳವಳಿಯ ವಿವಿಧ ವಿಷಯಗಳಲ್ಲಿ ಅನುಭವ ಪಡೆದಿರುವ ಯುವಕ-ಯುವತಿಯರಿಗೆ ತರಬೇತಿ ಮತ್ತು ಮಾರ್ಗದರ್ಶನ ಮಾಡಿರುವ ನೂರಾರು **H.W.B. Holders, Pre-ALT's, ALT's and LT's** ಗಳು ನಮ್ಮ ರಾಜ್ಯದಲ್ಲಿದ್ದು ಅವರುಗಳು ಪಡೆದಿರುವ ಪರಿಣಿತ ವಿಷಯಗಳಲ್ಲಿ ರಾಜ್ಯ ಸಂಸ್ಥೆಯ ಸ್ಕೌಟ್-ಗೈಡ್ ಪತ್ರಿಕೆಯಲ್ಲಿ ಪ್ರಕಟಿಸಲು ಚಿಕ್ಕ-ಚೊಕ್ಕ, ಸ್ಕೌಟ್ಸ್-ಗೈಡ್ಸ್‌ಗಳಿಗೆ ಸೂಕ್ತ ಮಾರ್ಗದರ್ಶನ ಮಾಡವ ವಿಷಯಾದರಿತ ಲೇಖನಗಳನ್ನು ಕಳುಹಿಸಲು ರಾಜ್ಯ ಸಂಸ್ಥೆಯಿಂದ ಪ್ರತ್ಯೇಕವಾಗಿ ಸುತ್ತೋಲೆ ಕಳುಹಿಸಲಾಗುವುದು. ರಾಜ್ಯ ಸಂಸ್ಥೆಗೆ ಬಂದಂತ ಲೇಖನಗಳನ್ನು ಪ್ರಕಟಿಸುವ, ಸೂಕ್ತ ಬದಲಾವಣೆ ಮಾಡುವ, ತಿದ್ದುಪಡಿ ಮಾಡುವ ಸಂಪೂರ್ಣ ಹೊಣೆಗಾರಿಕೆಯನ್ನು ಸಂಪಾದಕ ಮಂಡಲಿ ವಹಿಸಿಕೊಳ್ಳುತ್ತದೆ.

ಇತ್ತೀಚಿನ ವರ್ಷಗಳಲ್ಲಿ ಸ್ಕೌಟ್-ಗೈಡ್ ಮೂಲ ತರಬೇತಿ, ಮುಂದುವರೆದ ತರಬೇತಿ ಪಡೆದ ಶಿಕ್ಷಕರುಗಳು ಹಲವಾರು ಕಾರಣಗಳನ್ನು ನೀಡಿ, ಶಾಲೆಗಳಲ್ಲಿ ದಳ-ಘಟಕಗಳನ್ನು ಪ್ರಾರಂಭಿಸಲು ಸಾಧ್ಯವಾಗುತ್ತಿಲ್ಲವೆಂದು ಹೇಳುತ್ತಿರುವುದು ನಮಗೆಲ್ಲ ತಿಳಿದಿದೆ. ತರಬೇತಿ ಪಡೆದ ಎಲ್ಲರೂ ದಳಗಳನ್ನು ಪ್ರಾರಂಭಿಸುವಂತೆ ಅವರುಗಳನ್ನು ಹುರಿದುಂಬಿಸುವ, ಮಾರ್ಗದರ್ಶನ ಮಾಡುವ ಜವಾಬ್ದಾರಿ ಸ್ಥಳೀಯ, ಜಿಲ್ಲಾ ಸಂಸ್ಥೆಗಳ, ರಾಜ್ಯಸಂಸ್ಥೆಯ ಪದಾಧಿಕಾರಿಗಳ, ಜಿಲ್ಲೆಯ ಹಿರಿಯ ನಾಯಕರುಗಳ ಹಾಗೂ ಜಿಲ್ಲಾ ಸಂಘಟಕರುಗಳದ್ದು. ಆದುದರಿಂದ ಜಿಲ್ಲೆಗಳ-

ಸ್ಥಳೀಯ ಸಂಸ್ಥೆಗಳ ನನ್ನ ಸಹೋದ್ಯೋಗಿಗಳಲ್ಲಿ ನನ್ನ ಮನವಿ– ತರಬೇತಿ ಪಡೆದ ಶಾಲೆಗಳ ಶಿಕ್ಷಕ–ಶಿಕ್ಷಕಿಯರಿಗೆ ಅವಶ್ಯವಾದ ಸಹಾಯ–ಸಹಕಾರ–ಮಾರ್ಗದರ್ಶನ ಮಾಡಿ ಅವರುಗಳು ದಳ–ಘಟಕಗಳನ್ನು ಪ್ರಾರಂಭಿಸುವಂತೆ ಮಾಡುವ ಜವಾಬ್ದಾರಿ ನಮ್ಮಗಳೆಲ್ಲರ ಮೇಲಿದೆ.

2014–15ನೇ ಸಾಲಿನಲ್ಲಿ ಐದು ತಿಂಗಳು ಮುಗಿದಿದ್ದು, ಸೆಪ್ಟಂಬರ್ – ಅಕ್ಟೋಬರ್ ತಿಂಗಳುಗಳಲ್ಲಿ ಎಲ್ಲಾ ಜಿಲ್ಲಾ ಸಂಸ್ಥೆಗಳು ಸ್ಕೌಟ–ಗೈಡ್, ಕಬ್–ಬುಲ್ ಬುಲ್ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಿ ಕನಿಷ್ಠ 100–150 ಅಭ್ಯರ್ಥಿಗಳಿಗೆ ತರಬೇತಿ ಕೊಡಿಸುವಲ್ಲಿ ಯಶಸ್ವಿಯಾಗುತ್ತೀರೆಂದು ನಂಬಿದ್ದೇನೆ. ತರಬೇತಿ ಕಾರ್ಯಕ್ರಮಗಳನ್ನು ಯಶಸ್ವಿ ಗೊಳಿಸುವಲ್ಲಿ ಸಂಬಂಧಪಟ್ಟ ಜಿಲ್ಲೆಗಳ ASOC's/DOC's/ DO's/ DTC's/ H.W.B. Holders/ Pre- ALT's/ALT's/LT's ಹಾಗೂ ಪದಾಧಿಕಾರಿಗಳ ಕರ್ತವ್ಯ ಮತ್ತು ಜವಾಬ್ದಾರಿ ಎಂದು ನಂಬಿದವರಲ್ಲಿ ನಾನೊಬ್ಬ. ಆದುದರಿಂದ ನಮ್ಮ ರಾಜ್ಯದ 230 ಸ್ಥಳೀಯ ಸಂಸ್ಥೆಗಳ, 33 ಜಿಲ್ಲಾ ಸಂಸ್ಥೆಗಳ ಸಹೋದ್ಯೋಗಿಗಳಿಗೆ 2014–15ನೇ ಸಾಲಿನಲ್ಲಿ ಕನಿಷ್ಠ ಒಂದು ಮೂಲ ತರಬೇತಿ ಶಿಬಿರ ಏರ್ಪಡಿಸುವಂತೆ ಚಳವಳಿಯ ಹೆಸರಿನಲ್ಲಿ ಪ್ರಮಾಣ ಮಾಡಲು ಕೋರುತ್ತೇನೆ.

ಎಲ್ಲಿಯವರೆಗೆ ಚಳವಳಿಯ ವಿವಿದ ಹಂತಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪದಾಧಿಕಾರಿಗಳು, ಸ್ಕೌಟ್–ಗೈಡ್ ತರಬೇತಿ ಪಡೆದ ನಾಯಕ–ನಾಯಕಿಯರುಗಳು ಅವಶ್ಯವಾದ ಕ್ರಮಗಳನ್ನು ತೆಗೆದುಕೊಳ್ಳುವುದಿಲ್ಲವೋ, ಅಲ್ಲಿಯ ವರೆಗೆ ಸ್ಕೌಟ್–ಗೈಡ್ ಚಳವಳಿಯನ್ನು ಹೆಚ್ಚಿಸುವ ನಮ್ಮಗಳ ಸಂಕಲ್ಪ ಪರಿಣಾಮಕಾರಿ ಆಗುವುದಿಲ್ಲ.

ಸೆಪ್ಟಂಬರ್– ಅಕ್ಟೋಬರ್ ತಿಂಗಳುಗಳಲ್ಲಿ ರಾಷ್ಟ್ರಪತಿ ಸ್ಕೌಟ್–ಗೈಡ್ ಪರೀಕ್ಷಾ ಶಿಬಿರವನ್ನು ರಾಷ್ಟ್ರೀಯ ಸಂಸ್ಥೆಯವರು ಏರ್ಪಡಿಸಿದ್ದು, ರಾಜ್ಯ ಸಂಸ್ಥೆ ಈಗಾಗಲೇ ಸೂಕ್ತ ಸುತ್ತೋಲೆಗಳನ್ನು ನೀಡಿರುತ್ತದೆ. ಸಂಬಂಧಪಟ್ಟ ಜಿಲ್ಲೆಗಳ ಅರ್ಹ ಅಭ್ಯರ್ಥಿಗಳು ಮೇಲ್ಕಂಡ ಪರೀಕ್ಷಾ ಶಿಬಿರಗಳಿಗೆ ಅವಶ್ಯ ಮಾಹಿತಿಗಳೊಂದಿಗೆ ಹಾಜರಾಗಿ ರಾಷ್ಟ್ರಪತಿ ಸ್ಕೌಟ್–ಗೈಡ್ ಆಗಬೇಕೆಂಬ ಅಭಿಲಾಷೆ ರಾಜ್ಯ ಸಂಸ್ಥೆಯದು. ಆದುದರಿಂದ ಸಂಬಂಧಪಟ್ಟ ಜಿಲ್ಲೆಗಳ ASOC's/DOC's/ DO'sಗಳು ಅರ್ಹ ಅಭ್ಯರ್ಥಿಗಳನ್ನು ಸಂಬಂಧಪಟ್ಟ ತರಬೇತಿ ಕೇಂದ್ರಕ್ಕೆ ಸೂಕ್ತ ತಯಾರಿಯೊಂದಿಗೆ ಭಾಗವಹಿಸಲು ಸೂಚಿಸಿ–ನಿಮ್ಮ ಅಭ್ಯರ್ಥಿಗಳು ಪರೀಕ್ಷೆಯಲ್ಲಿ ಯಶಸ್ವಿಗೊಳಿಸುವಂತೆ ತಯಾರು ಮಾಡುವ ಜವಾಬ್ದಾರಿ ದಳ–ಘಟಕಗಳ ನಾಯಕರುಗಳದ್ದು.

ಸ್ಕೌಟ್ – ಗೈಡ್ ಪ್ರಪಂಚದ ಅತ್ಯಂತ ಪ್ರಬಲವಾದ ಯುವ ಸಂಘಟನೆ. ಚಳವಳಿಯಲ್ಲಿ ಸೇವೆ ಸಲ್ಲಿಸುವ, ಕಾರ್ಯನಿರ್ವಹಿಸುವ ಸದಾವಕಾಶ ನನ್ನ ಹಾಗೂ ನಿಮ್ಮಗಳ ಪಾಲಿಗೆ ದೊರಕಿರುವುದು ನಮ್ಮ ಪಾಲಿನ ಸದಾವಕಾಶ ಎಂದು ಭಾವಿಸಿದ್ದೇನೆ. ಆದುದರಿಂದ ನಮ್ಮಗಳ ಕರ್ತವ್ಯ, ಜವಾಬ್ದಾರಿಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಚಳವಳಿಯ ಸಂಸ್ಥಾಪಕ ಲಾರ್ಡ್ ಬೇಡನ್ ಪೋವೆಲ್ಲರ ಜೀವನ – ಸಾಧನೆ – ಚಿಂತನೆಗಳು ನಮಗೆಲ್ಲಾ ಮಾರ್ಗದರ್ಶನ ಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

ರಾಜ್ಯ ವಾರ್ತೆಗಳು................

## ರೋವರ್ಸ್‌ಗಳ ರಾಜ್ಯಮಟ್ಟದ ಸಮುದಾಯ ಸೇವಾ ಶಿಬಿರ-I

ರೋವರ್ಸ್‌ಗಳ ರಾಜ್ಯ ಮಟ್ಟದ ಸಮುದಾಯ ಸೇವಾ ಶಿಬಿರವನ್ನು ದಿನಾಂಕ:03.08.2014 ರಿಂದ 07.08.2014ರವರೆಗೆ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ಏರ್ಪಡಿಸಲಾಗಿತ್ತು.

ಈ ಶಿಬಿರದಲ್ಲಿ 64 ರೋವರ್ಸ್‌ಗಳು ಪಾಲ್ಗೊಂಡಿದ್ದರು. ಶಿಬಿರದ ನಾಯಕರಾಗಿ ಶ್ರೀ ವಿ.ಎ.ಸಾತಪುತೆ, ಆರ್.ಎಸ್.ಎಲ್, ಗೋಕಾಕ್ ಕಾರ್ಯ ನಿರ್ವಹಿಸಿದರು.

ದಿನಾಂಕ: 03.08.2014ರಂದು ರಾಜ್ಯ ಜಂಟಿ ಕಾರ್ಯದರ್ಶಿ, ಶ್ರೀ ಎಂ.ಎ.ಚೆಲ್ಲಯ್ಯ ಶಿಬಿರವನ್ನು ಉದ್ಘಾಟಿಸಿದರು. ಈ ಶಿಬಿರದಲ್ಲಿ ಕೆಳಕಂಡ ಕೆಲಸಗಳನ್ನು ಮಾಡಲಾಯಿತು ಮತ್ತು ರೋವರ್ಸ್‌ಗಳಿಗೆ ಸ್ಕೌಟಿಂಗ್ ಬಗ್ಗೆ ವಿಚಾರಗಳನ್ನು ಸಹ ಭೋಧಿಸಲಾಯಿತು.

1) ಸೆಲ್ವಿದಾಸ್ ಅಡಿಗೆ ಮನೆಯ ಸುತ್ತಾ ಹುಲ್ಲುಕಳೆಯನ್ನು ಕಿತ್ತು ಸ್ವಚ್ಛಮಾಡಲಾಯಿತು ಮತ್ತು ಸೆಷೆನ್ಸ್ ವೃತ್ತ, ಟೆಂಟ್ ಬೇಸ್‌ಗಳ ಸುತ್ತಾ ಹಾಗೂ ಮೈದಾನವನ್ನು ಸ್ವಚ್ಛಗೊಳಿಸಲಾಯಿತು.

2) 27ನೇ ರಾಜ್ಯ ಜಾಂಬೋರೇಟ್‌ಗೆ ಆಯ್ಕೆಮಾಡಿದ ಅಡಿಗೆ ಮನೆಯ ಸ್ಥಳ, ಟವರ್ ಹಿಂಭಾಗದ ರಿಂಗ್‌ರಸ್ತೆ, ಶೂಟಿಂಗ್ ರೇಂಜ್‌ನಿಂದ ಈಜುಕೊಳದವರೆಗೆ ರಸ್ತೆಯನ್ನು ಮಾಡಲಾಯಿತು.

3) ಶ್ರೀ ಗಣಪತಿ ದೇವಸ್ಥಾನದ ಮುಂಭಾಗ ಸ್ವಚ್ಛಗೊಳಿಸಲಾಯಿತು.

4) ಗಾಂಧೀಭವನದ ಸುತ್ತಾ ಹಾಗೂ ಹಿಂದೆ ಇದ್ದ ನರ್ಸರಿ ಜಾಗವನ್ನು ಸ್ವಚ್ಛಗೊಳಿಸಲಾಯಿತು ಮತ್ತು ಗಾಂಧಿಭವನದ ಹತ್ತಿರದ ರಿಂಗ್ ರಸ್ತೆಯನ್ನು ಮಾವಿನ ತೋಪಿನವರೆಗೆ ಸರಿಪಡಿಸಲಾಯಿತು.

5) ಜಯಾಗೇಟ್ ನಿಂದ ಅನಂತರಾಮ್ ವೃತ್ತದ ವರೆಗೆ ರಸ್ತೆಯ 2 ಭಾಗಗಳಲ್ಲಿ ಹುಲ್ಲು, ಕುರುಚಲು ಗಿಡಗಳನ್ನು ತೆಗೆದು ಚರಂಡಿಯನ್ನು ಸ್ವಚ್ಛಗೊಳಿಸಲಾಯಿತು.

6) ಲಾಗ್‌ಕ್ಯಾಬಿನ್ ಹಿಂಭಾಗದ ರಿಂಗ್‌ರಸ್ತೆ ಮತ್ತು ಕ್ಯಾಬಿನ್‌ರಸ್ತೆಯನ್ನು ಸ್ವಚ್ಛಮಾಡಲಾಯಿತು.

ದಿನಾಂಕ:07.08.2014ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರ ಅಧ್ಯಕ್ಷತೆಯಲ್ಲಿ ಮುಕ್ತಾಯ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಮುಖ್ಯ ಅತಿಥಿಗಳಾಗಿ ಶ್ರೀ ಗೊ.ರು.ಚನ್ನಬಸಪ್ಪ, ಅಧ್ಯಕ್ಷರು, ಪ್ರಕಟಣಾ ವಿಭಾಗ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಶ್ರೀ ಸಿ.ಎಸ್.ರೆಡ್ಡಿ, ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಜಾನಕಿ ವೇಣುಗೋಪಾಲ್, ನಿವೃತ್ತ ರಾಜ್ಯ ಸಂಘಟನಾ ಆಯುಕ್ತರು

(ಗೈಡ್ಸ್), ಶ್ರೀ ಎಲ್.ಟಿ. ಲೋಕೇಶ್, ಪ್ರಭಾರಿ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಸಿ.ಮಂಜುಳ, ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್)ರವರು ಉಪಸ್ಥಿತರಿದ್ದರು.

ದಿನಾಂಕ: 07.08.2014ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ನಡೆಸಿ ಮಧ್ಯಾಹ್ನ 1 ಗಂಟೆಗೆ ಶಿಬಿರ ಮುಕ್ತಾಯ ಮಾಡಲಾಯಿತು.

## ರೋವರ್ಸ್‌ಗಳ ರಾಜ್ಯ ಮಟ್ಟದ ಸಮುದಾಯ ಸೇವಾ ಶಿಬಿರ-II

ದಿನಾಂಕ : 09-08-2014 ರಿಂದ 13-08-2014 ರ ವರೆಗೆ ರೋವರ್ಸ್‌ಗಳ ರಾಜ್ಯಮಟ್ಟದ ಸಮುದಾಯ ಸೇವಾ ಶಿಬಿರವನ್ನು ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ 90 ರೋವರ್ಸ್‌ಗಳು ಭಾಗವಹಿಸಿದ್ದರು. ಶಿಬಿರಾರ್ಥಿಗಳನ್ನು 2 ಗುಂಪುಗಳನ್ನಾಗಿ ಮಾಡಿ ಈ ಕೆಳಕಂಡ ಸ್ಥಳಗಳಲ್ಲಿ ಶ್ರಮದಾನ ಮಾಡಲಾಯಿತು

1) ಗಾಂಧೀ ಭವನದ ಹಿಂಭಾಗ, ಮಾವಿನ ತೋಪಿನ ರಿಂಗ್ ರಸ್ತೆ, ಲಾಗ್ ಕ್ಯಾಬಿನ್ ಹಿಂಭಾಗ ಈಜುಕೊಳದ ಹಿಂಭಾಗ ಮತ್ತು ರಾಕ್ ಸರ್ಕಲ್ ಹಿಂಭಾಗದ ರಸ್ತೆ ಇವುಗಳನ್ನು ಸ್ವಚ್ಛ ಮಾಡಲಾಯಿತು.

2) ಪೆರೇಡ್ ಮೈದಾನದ ಹಿಂಭಾಗ, ನೀರಿನ ಟ್ಯಾಂಕ್‌ನಿಂದ ಟವರ್ ವರೆಗಿನ ರಸ್ತೆಯನ್ನು ಸರಿಮಾಡಿ ಗಿಡಗಳನ್ನು ಸ್ವಚ್ಛಮಾಡಲಾಯಿತು.

3) ಲಾಗ್ ಕ್ಯಾಬಿನ್ ಹತ್ತಿರ ಒಂದು ತರಗತಿ ವೃತ್ತ ಮತ್ತು ಮಾವಿನ ತೋಪಿನಲ್ಲಿ ಒಂದು ತರಗತಿ ವೃತ್ತ ಮಾಡಲಾಯಿತು.

4) ಈಜುಕೊಳವನ್ನು ಸ್ವಚ್ಛ ಮಾಡಲಾಯಿತು.

5) ತೆಂಗಿನ ಗಿಡಗಳ ಹತ್ತಿರ ಹೊಸದಾಗಿ ಕಟ್ಟಿದ ಕಟ್ಟಡದ ಸುತ್ತ ಕಸ, ಗಿಡಗಳನ್ನು ಕತ್ತರಿಸಿ ತೆಗೆಯಲಾಯಿತು.

6) ನಿಜಲಿಂಗಪ್ಪ ಭವನದ ಹಿಂಭಾಗ, ಗಾಂಧಿ ಭವನಕ್ಕೆ ಅನಂತರಾಮ್ ಸರ್ಕಲ್‌ನಿಂದ ಬರುವ ದಾರಿ, ಸ್ಟೋರ್ ರೂಂ ಮುಂಭಾಗ ಹಾಗೂ ಹಿಂಭಾಗ ಸ್ವಚ್ಛ ಮಾಡಲಾಯಿತು.

7) ಕಂಠೀರವ ಭವನದ ಹಿಂಭಾಗ ಮತ್ತು ಪ್ರೊ. ಪಿ. ಶಿವಶಂಕರ್ ಗ್ರಂಥಾಲಯ ಸುತ್ತ ಸ್ವಚ್ಛ ಮಾಡಲಾಯಿತು.

8) ಶಿಬಿರಕ್ಕೆ ಒಳ ಬರುವ ಮುಖ್ಯ ದ್ವಾರದ ಗೇಟ್‌ನ 2 ಕಡೆ ಸ್ವಚ್ಛ ಮಾಡಲಾಯಿತು.

9) ಕೌನ್ಸಿಲ್ ರಾಕ್ ಹತ್ತಿರದ ಟೆಂಟ್ ಬೇಸ್ ಹತ್ತಿರ ಸ್ವಚ್ಛಗೊಳಿಸಲಾಯಿತು.

ಇದಲ್ಲದೆ, ಬಿ.ಪಿ. ವ್ಯಾಯಾಮ, ಶಿಬಿರಾಗ್ನಿ ಮತ್ತು ರೋವರ್ಸ್‌ಗಳ ಪ್ರತಿಪರ ಶಿಕ್ಷಣದ ಬಗ್ಗೆ ತಿಳಿಸಲಾಯಿತು.

ದಿನಾಂಕ 13-08-2014 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ನಂತರ ಮಧ್ಯಾನ್ಹ 1 ಗಂಟೆಗೆ ಶಿಬಿರವನ್ನು ಮುಕ್ತಾಯಗೊಳಿಸಲಾಯಿತು.

## ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ 68ನೇ ಸ್ವಾತಂತ್ರ್ಯ ದಿನಾಚರಣೆ

ದಿನಾಂಕ 15-08-2014 ರಂದು 68ನೇ ಸ್ವಾತಂತ್ರ್ಯ ದಿನಾಚರಣೆಯನ್ನು ರಾಜ್ಯ ಕಾರ್ಯಾಲಯದ ಆವರಣದಲ್ಲಿ ಆಚರಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ನವರು ಬೆಳಗ್ಗೆ ರಾಷ್ಟ್ರಧ್ವಜವನ್ನು ಅರಳಿಸಿದರು. ಈ ಸಂದರ್ಭದಲ್ಲಿ ಅವರು ಮಾತನಾಡುತ್ತ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ವಾತಂತ್ರ್ಯೋತ್ಸವದ ಬಗ್ಗೆ ಸಂದೇಶ ನೀಡಿದರು. ಶ್ರೀ ಎಂ.ಎ. ಚೆಲ್ಲಯ್ಯ ರಾಜ್ಯ ಜಂಟಿ ಕಾರ್ಯದರ್ಶಿ(ಸ್ಕೌಟ್ಸ್), ಶ್ರೀಮತಿ ಬಿ.ವಿ. ರಾಮಲತ ರಾಜ್ಯ ಜಂಟಿ ಕಾರ್ಯದರ್ಶಿ(ಗೈಡ್ಸ್) ಶ್ರೀ ಎನ್. ಶ್ರೀನಿವಾಸನ್, ಕೇಂದ್ರ ಸ್ಥಾನಿಕ ಆಯುಕ್ತರು(ಪ್ರಕಟಣೆ) ಶ್ರೀ ಕೆ. ತಿಮ್ಮಪ್ಪ, ಕೇಂದ್ರ ಸ್ಥಾನಿಕ ಆಯುಕ್ತರು(ಸ್ಕೌಟ್ಸ್), ಶ್ರೀಮತಿ ಗೀತಾ ನಟರಾಜ್, ಕೇಂದ್ರ ಸ್ಥಾನಿಕ ಆಯುಕ್ತರು(ಗೈಡ್ಸ್) ಶ್ರೀಮತಿ ಜಾನಕಿ ವೇಣುಗೋಪಾಲ್, ಮಾಜಿ, ರಾಜ್ಯ ಸಂಘಟನಾ ಆಯುಕ್ತರು(ಗೈಡ್ಸ್), ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ಕೆ. ಶ್ಯಾಮಲ, ರಾಜ್ಯ ತರಬೇತಿ ಆಯುಕ್ತರು(ಗೈಡ್ಸ್) ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಶ್ರೀ ಎಂ. ಶ್ರೀನಿವಾಸ್, ಗ್ರೂಪ್ ಲೀಡರ್ ಕಂಠೀರವ ಸ್ಕೌಟ್ ಗ್ರೂಪ್, ಹಾಗೂ ರಾಜ್ಯ ಪದಾಧಿಕಾರಿಗಳು, ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಮತ್ತು ಪೋಷಕರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಇದೇ ಸಂದರ್ಭದಲ್ಲಿ ಸ್ವಾತಂತ್ರ್ಯ ದಿನಾಚರಣೆಯ ಬಗ್ಗೆ ಮಾತನಾಡಿದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಬಹುಮಾನವನ್ನು ವಿತರಣೆ ಮಾಡಲಾಯಿತು. ಬೆಂಗಳೂರು ದಕ್ಷಿಣ ಮತ್ತು ಉತ್ತರ ಜಿಲ್ಲೆಗಳಿಂದ 200 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸದ್ದರು.

ಬೆಂಗಳೂರು ಫೀಲ್ಡ್ ಮಾರ್ಷಲ್ ಮಾಣಿಕ್ ಷಾ ಕವಾಯಿತು ಮೈದಾನದಲ್ಲಿ ನಡೆದ ಸ್ವಾತಂತ್ರ್ಯ ದಿನಾಚರಣೆಯಲ್ಲಿ ಬೆಂಗಳೂರು ಉತ್ತರ ಜಿಲ್ಲೆಯ ಶ್ರೀ ಅಯ್ಯಪ್ಪ ಎಜುಕೇಷನ್ ಟ್ರಸ್ಟ್ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪಥಸಂಚಲನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಕಬ್ ಮಾಸ್ಟರ್, ಸ್ಕೌಟ್ ಮಾಸ್ಟರ್ ಮತ್ತು ರೋವರ್ ಸ್ಕೌಟ್ ಲೀಡರ್‌ಗಳ ರಾಜ್ಯಮಟ್ಟದ ಮೂಲತರಬೇತಿ, ಅಗ್ರಗಾಮಿ ಮತ್ತು ಅಂದಾಜು ಮಾಡುವಿಕೆ ತರಬೇತಿ

ದಿನಾಂಕ : 15-07-2014 ರಿಂದ 04-07-2014 ರ ವರೆಗೆ ಕಬ್ ಮಾಸ್ಟರ್‌ಗಳ, ಸ್ಕೌಟ್ ಮಾಸ್ಟರ್‌ಗಳ, ರೋವರ್ ಸ್ಕೌಟ್ ಲೀಡರ್‌ಗಳ ರಾಜ್ಯ ಮಟ್ಟದ ಪ್ರಾಥಮಿಕ ತರಬೇತಿಯನ್ನು ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರಗಳಲ್ಲಿ ಕಬ್ ಮಾಸ್ಟರ್‌ಗಳ ಪ್ರಾಥಮಿಕ ಶಿಬಿರಕ್ಕೆ 14 ಶಿಬಿರಾರ್ಥಿಗಳು ಸ್ಕೌಟ್ ಮಾಸ್ಟರ್‌ಗಳ ಪ್ರಾಥಮಿಕ ಶಿಬಿರಕ್ಕೆ 35 ಶಿಬಿರಾರ್ಥಿಗಳು, ರೋವರ್ ಸ್ಕೌಟ್ ಲೀಡರ್‌ಗಳ ತರಬೇತಿ ಶಿಬಿರಕ್ಕೆ

38 ಶಿಬಿರಾರ್ಥಿಗಳು ಮತ್ತು ಅಗ್ರಗಾಮಿ ಹಾಗೂ ಅಂದಾಜು ತರಬೇತಿ ಶಿಬಿರಕ್ಕೆ 26 ಶಿಬಿರಾರ್ಥಿಗಳು ಭಾಗವಹಿಸಿದ್ದರು.

ಕಬ್ ಮಾಸ್ಟರ್‌ಗಳ ತರಬೇತಿಗೆ ಶ್ರೀಮತಿ ಸಿ. ಸಂಧ್ಯಾರಾಣಿ, ಎಲ್.ಟಿ.(ಕಬ್) ಚಿಕ್ಕಮಗಳೂರು. ಸ್ಕೌಟ್ ಮಾಸ್ಟರ್‌ಗಳ ತರಬೇತಿ ಶಿಬಿರಕ್ಕೆ ಶ್ರೀ ಬಾಬುರಾವ್ ನಿಂಬೂರೇ, ಎ.ಎಲ್.ಟಿ. (ಸ್ಕೌಟ್) ಮತ್ತು ರೋವರ್ ಸ್ಕೌಟ್ ಲೀಡರ್‌ಗಳ ತರಬೇತಿಗೆ ಶ್ರೀ ಎ.ಎಂ. ಶಂಕರ್ ಎಲ್.ಟಿ.(ರೋವರ್) ನಾಯಕರಾಗಿದ್ದು ಕಾರ್ಯನಿರ್ವಹಿಸಿದರು. ಶಿಬಿರದ ತಾಂತ್ರಿಕ ಸಲಹೆಗಾರರಾಗಿ ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ. (ಸ್ಕೌಟ್) ಹಾಗೂ ಶ್ರೀ ಟಿ.ಎಸ್. ಲೂಕಾಸ್, ಎಲ್.ಟಿ.(ಸ್ಕೌಟ್), ರಾಜ್ಯ ಆಯುಕ್ತರು(ಸ್ಕೌಟ್) ಭಾಗವಹಿಸಿದ್ದರು.

ದಿನಾಂಕ 31-07-2014 ರಿಂದ 04-08-2014 ರ ವರೆಗೆ ರಾಜ್ಯಮಟ್ಟದ ಅಗ್ರಗಾಮಿ ಮತ್ತು ಅಂದಾಜು ಮಾಡುವಿಕೆ ಶಿಬಿರವನ್ನು ಶ್ರೀ ಜಿಮ್ಮಿ ಸಿಕ್ವೇರಿಯಾ ಎಲ್.ಟಿ.(ಸ್ಕೌಟ್) ರವರ ನಾಯಕತ್ವದಲ್ಲಿ ನಡೆಸಲಾಯಿತು.

ದಿನಾಂಕ 28-07-2014 ರಂದು ಶ್ರೀ ಎನ್. ಶ್ರೀನಿವಾಸನ್ ರವರು ಶಿಬಿರಾರ್ಥಿಗಳಿಗೆ ಶುಭ ಹಾರೈಸುವುದರ ಮೂಲಕ ಶಿಬಿರದ ಉದ್ಘಾಟನೆಯನ್ನು ನೆರವೇರಿಸಿದರು. ಶ್ರೀ ಎಂ.ಎ. ಚೆಲ್ಲಯ್ಯ, ರಾಜ್ಯ ಜಂಟಿ ಕಾರ್ಯದರ್ಶಿಗಳು(ಸ್ಕೌಟ್) ಶಿಬಿರಕ್ಕೆ ಭೇಟಿ ನೀಡಿ ಉಪನ್ಯಾಸ ನೀಡಿದರು. ದಿನಾಂಕ 04-08-2014 ರಂದು ಶಿಬಿರದ ಸಮಾರೋಪ ಸಮಾರಂಭವು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಗೊ.ರು. ಚನ್ನಬಸಪ್ಪ, ಸಾಹಿತಿ ಹಾಗೂ ರಾಜ್ಯ ಸಂಸ್ಥೆ ಪ್ರಕಟನಾ ಸಮಿತಿಯ ಅಧ್ಯಕ್ಷರು ಆಗಮಿಸಿ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಶಿಸ್ತು, ಸಮಾಜ ಸೇವೆ, ಪರೋಪಕಾ ಮುಂತಾದ ಗುಣಗಳನ್ನು ಬೆಳೆಸಿಕೊಂಡು ಮಕ್ಕಳಲ್ಲಿ ವಿವಿಧ ಕೌಶಲ್ಯಗಳನ್ನು ಬೆಳೆಸಲು ಶ್ರಮಿಸುವಂತೆ ತಿಳಿಸಿದರು.

ಸಮಾರಂಭದಲ್ಲಿ ಶ್ರೀ ಚಿನ್ನಸ್ವಾಮಿ ರೆಡ್ಡಿ, ಕೇಂದ್ರ ಸ್ಥಾನಿಕ ಆಯುಕ್ತರು (ತರಬೇತಿ) ಶ್ರೀಮತಿ ಜಾನಕಿ ವೇಣುಗೋಪಾಲ್ ನಿವೃತ್ತ ರಾಜ್ಯ ಸಂಘಟನಾ ಆಯುಕ್ತರು(ಗೈಡ್) ರವರು ಉಪಸ್ಥಿತರಿದ್ದು ಶಿಬಿರಾರ್ಥಿಗಳನ್ನು ಕುರಿತು ಮಾತನಾಡಿದರು. ಶ್ರೀ ಎಲ್.ಟಿ. ಲೋಕೇಶ್, ಪ್ರಭಾರಿ ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್) ಸರ್ವರನ್ನು ಸ್ವಾಗತಿಸಿದರು. ಶ್ರೀ ನಾಗೇಶ್ ಆರ್. ಶಿವಪುರ್ ಕಾರ್ಯಕ್ರಮ ನಿರೂಪಿಸಿದರು. ಶ್ರೀಮತಿ ಮಂಜುಳಾ, ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತೆ (ಗೈಡ್) ಸಮಾರಂಭದಲ್ಲಿ ಉಪಸ್ಥಿತರಿದ್ದರು. ಶ್ರೀ ಟಿ.ಎ. ಮಂಜುನಾಥಾಚಾರ್ ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್) ರವರು ಸರ್ವರನ್ನು ವಂದಿಸಿದರು.

# ಜಿಲ್ಲಾ ವಾರ್ತೆಗಳು................

## ಹಾಸನ

ದಿನಾಂಕ 25-07-2014 ರಿಂದ 27-07-2014 ರ ವರೆಗೆ ಜಿಲ್ಲಾ ಮಟ್ಟದ ತೃತೀಯ ಸೋಪಾನ ತರಬೇತಿ ಮತ್ತು ಪರೀಕ್ಷಾ ಶಿಬಿರವನ್ನು ಹಾಸನದ ಸ್ಕೌಟ್ಸ್-ಗೈಡ್ಸ್ ಸಮುದಾಯ ಭವನದಲ್ಲಿ ಏರ್ಪಡಿಸಲಾಗಿತ್ತು. ಈ ಶಿಬಿರಕ್ಕೆ ವಿವಿಧ ತಾಲ್ಲೂಕುಗಳಿಂದ 120 ಸ್ಕೌಟ್ಸ್ ಹಾಗೂ 150 ಗೈಡ್ಸ್, ಸ್ಕೌಟರ್ಸ್ ಸೇರಿ ಒಟ್ಟು 300 ಜನ ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗಕ್ಕೆ ಶ್ರೀ ಎಂ.ಎಸ್. ಪ್ರಕಾಶ್, ಗೈಡ್ ವಿಭಾಗಕ್ಕೆ ಶ್ರೀಮತಿ ವೈ.ಡಿ. ಪದ್ಮ, ತಾಂತ್ರಿಕ ಸಲಹೆಗಾರರಾಗಿ ಶ್ರೀಮತಿ ಕಾಮೇಶ್ವರಿ ಸೇವೆ ಸಲ್ಲಿಸಿದರು. ದಿನಾಂಕ 25-07-2014 ರಂದು ಉದ್ಘಾಟನಾ ಸಮಾರಂಭ ಜರುಗಿತು. ಉದ್ಘಾಟನೆಯನ್ನು ಲಯನ್ಸ್ ಸೇವಾ ಸಂಸ್ಥೆಯ ಜಿಲ್ಲಾ ರಾಜ್ಯಪಾಲರಾದ ಶ್ರೀ ಎಂ.ಎಸ್. ಮಂಜುನಾಥಮೂರ್ತಿಯವರು ನೆರವೇರಿಸಿದರು. ಜಿಲ್ಲಾ ಸಂಸ್ಥೆಗೆ ಬೇಕಾದ ಬ್ಯಾಂಡ್‌ಸೆಟ್, 300 ಲೋಟಗಳು ಮತ್ತು ವಿದ್ಯಾರ್ಥಿಗಳಿಗೆ ವಾಚ್‌ಗಳನ್ನು ಜಿಲ್ಲಾ ಲಯನ್ಸ್ ಸೇವಾ ಸಂಸ್ಥೆಯ ವತಿಯಿಂದ ನೀಡುವ ಭರವಸೆ ಇತ್ತರು. ಇದೇ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಮುತ್ತೇಗೌಡರು ಸಂಸ್ಥೆಗೆ ಹೆಚ್ಚುವರಿಯಾಗಿ 1 ಬೋರ್‌ವೆಲ್ ಹಾಗೂ 10 ಶೌಚಾಲಯಗಳಿಗಾಗಿ ಮನವಿ ಸಲ್ಲಿಸಿದಾಗ, ಅವುಗಳನ್ನು ನಿರ್ಮಿಸಿಕೊಡುವುದಾಗಿ ಭರವಸೆ ನೀಡಿದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ಮಂಜುನಾಥ್ ಮೂರ್ತಿ, ಲಯನ್ಸ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಂ.ಆರ್. ಪ್ರಕಾಶ್, ಲಯನ್ಸ್ ಸಂಸ್ಥೆಯ ಸದಸ್ಯರಾದ ಶ್ರೀ ಸಂಜೀವ್ ಹೆಗ್ಗಡೆ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಜಯಾ ರಮೇಶ್ ಉಪಸ್ಥಿತರಿದ್ದರು.

ದಿನಾಂಕ 27 ರಂದು ಸಮಾರೋಪ ಸಮಾರಂಭ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ವೈ.ಎಸ್. ವೀರಭದ್ರಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿತು ಗೈಡ್ ಆಯುಕ್ತರಾದ ಶ್ರೀಮತಿ ಜಯಾ ರಮೇಶ್ ಉಪಸ್ಥಿತರಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡರು ಸರ್ವರನ್ನು ಸ್ವಾಗತಿಸಿದರು. ಜಿಲ್ಲಾ ತರಬೇತಿ ಆಯುಕ್ತರಾದ ಕಾಂಚನಮಾಲಾ ವಂದಿಸಿದರು.

******************

ದಿನಾಂಕ 15-08-2014 ರಂದು ಅರಸೀಕೆರೆ ಶ್ರೀ ಜೇನುಕಲ್ ಕ್ರೀಡಾಂಗಣದಲ್ಲಿ ನಡೆದ 68ನೇ ಸ್ವಾತಂತ್ರೋತ್ಸವ ಕಾರ್ಯಕ್ರಮದಲ್ಲಿ ರೋಟರಿ ಪ್ರೌಢಶಾಲೆಯ ಸ್ಕೌಟ್ ಮಾಸ್ಟರ್ ಚೇತನ್ ಶರ್ಮಾರೊಂದಿಗೆ 64 ಸ್ಕೌಟ್ಸ್, 32 ಗೈಡ್ಸ್ ಪಥಸಂಚಲನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಅಂದಿನ ಕಾರ್ಯಕ್ರಮದಲ್ಲಿ 2013-14ನೇ ಸಾಲಿನಲ್ಲಿ "ರಾಜ್ಯ ಪುರಸ್ಕಾರ" ಪಡೆದಿರುವ ಸ.ಪ್ರೌ.ಶಾಲೆ ಗಂಡಸಿ ಸಂತೆ ಮೈದಾನದ 6 ಗೈಡ್ಸ್, ಸ. (ಬಾಲಕೀಯರ), ಪ್ರೌ.ಶಾಲೆ, ಅರಸೀಕೆರೆಯ 8 ಗೈಡ್ಸ್, ಸ.ಪ್ರೌ.ಶಾಲೆ, ಬಿ.ಹೆಚ್. ರಸ್ತೆ, ಅರಸೀಕೆರೆಯ 1 ಗೈಡ್ ಮತ್ತು 16 ವರ್ಷಗಳ ಕಾಲ ಸ್ಕೌಟ್ ಮಾಸ್ಟರ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾದ ಹಾಗೂ ಸ್ಥಳೀಯ ಸಂಸ್ಥೆ ಚಟುವಟಿಕೆಗಳಿಗೆ ನಿರಂತರವಾಗಿ ಸಹಕರಿಸಿದ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಜಿ.ಕೆ. ಗಂಗಾಧರ್ ರವರನ್ನು ಮತ್ತು ಇತ್ತೀಚೆಗೆ ಮಧ್ಯಪ್ರದೇಶದ ಪಚಮರಿಯ ಎನ್.ಟಿ.ಸಿಯಲ್ಲಿ ಹೆಚ್. ಡಬ್ಲ್ಯೂ.ಬಿ.(ಎಸ್.) ತರಬೇತಿಯನ್ನು ಪಡೆದು ರಾಜ್ಯ ಸ್ಕೌಟರ್ ಪ್ರತಿನಿಧಿಯಾಗಿ ಆಯ್ಕೆಯಾಗಿರುವ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಜೆ.ಎಲ್. ಲೀಲಾಮಹೇಶ್ವರ್ ರನ್ನು ಶಾಸಕರಾದ ಶ್ರೀ ಕೆ.ಎಂ. ಶಿವಲಿಂಗೇಗೌಡರು, ತಹಶೀಲ್ದಾರ್ ಶ್ರೀ ನಟರಾಜ್, ಕ್ಷೇತ್ರಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಪಿ. ನಟರಾಜ್, ಸಮಾಜ ಸೇವಕರಾದ ಶ್ರೀ ಹೆಚ್.ಟಿ. ಮಹಾದೇವ್ ಸನ್ಮಾನಿಸಿದರು.

# ಕೋಲಾರ

ದಿನಾಂಕ 15-08-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಅರವತ್ತೆಂಟನೆಯ ಸ್ವಾತಂತ್ರ್ಯ ದಿನಾಚರಣೆಯನ್ನು ಕಮಲ ಮಹದಿ ಶಾಲಾ ಆವರಣದಲ್ಲಿ ಆಚರಿಸಲಾಯಿತು. ನಗರದ ಮಹಿಳಾ ಕಾಲೇಜಿನ, ರೇಂಜರ್‌ಗಳು, ಬಾಲಕರ ಕಾಲೇಜಿನ ರೋವರ್‌ಗಳು ಆಕ್ಸ್‌ಫರ್ಡ್ ಶಾಲೆಯ ಬುಲ್ ಬುಲ್‌ಗಳು, ಸುಭಾಷ್ ಶಾಲೆಯ ಸ್ಕೌಟ್ಸ್‌ಗಳು ಮತ್ತು ಮಹಿಳಾ ಸಮಾಜ ಶಾಲೆಯ ಕಬ್, ಬುಲ್ ಬುಲ್‌ಗಳು, ಸ್ಕೌಟ್ಸ್, ಗೈಡ್‌ಗಳು ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಕೆ.ವಿ. ಶಂಕರಪ್ಪ, ಶ್ರೀ ಬಿಸಪ್ಪಗೌಡ, ಶ್ರೀಮತಿ ಜಯಶ್ರೀ, ಡಾ॥ ಚಂದ್ರಶೇಖರ್, ಮುಂತಾದವರು ಭಾಗವಹಿಸಿದ್ದರು.

**********

ದಿನಾಂಕ 26-07-2014 ರಿಂದ 30-07-2014 ರ ವರೆಗೆ ಕೋಲಾರ ಜಿಲ್ಲೆಯ ತಾಲ್ಲೂಕಿನ ಸೀತಿ ಗ್ರಾಮದಲ್ಲಿನ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಶಾಲೆಯ ಆವರಣದಲ್ಲಿ ಜಿಲ್ಲೆಯ ರೋವರ್ಸ್‌ಗಳಿಗೆ ಸಾಹಸ ಮತ್ತು ಸಮುದಾಯ ಅಭಿವೃದ್ಧಿ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದ ನಾಯಕತ್ವವನ್ನು 'ಸಾಮ್ರಾಟ್ ಓಪನ್ ರೋವರ್ ಟ್ರೂಪ್‌ನ ನಾಯಕರಾದ ಶ್ರೀ ಕೆ.ಆರ್. ಸುರೇಶ್ ರವರು ವಹಿಸಿದ್ದರು. ಕೋಲಾರ ಸರ್ಕಾರಿ ಬಾಲಕರ ಕಾಲೇಜಿನ 20 ರೋವರ್‌ಗಳು ಬಂಗಾರಪೇಟೆ ಪ್ರಥಮ ದರ್ಜೆ ಕಾಲೇಜಿನ 6 ರೋವರ್‌ಗಳು ಮತ್ತು ಮಾಲೂರು ಪ್ರಥಮ ದರ್ಜೆ ಕಾಲೇಜಿನ 20 ರೋವರ್‌ಗಳು ಭಾಗವಹಿಸಿದ್ದರು.

ಶಿಬಿರದ ಉದ್ಘಾಟನೆಯನ್ನು ಬಿ.ಜಿ.ಎಸ್. ಶಾಲೆಯ ಪ್ರಾಂಶುಪಾಲರಾದ ಶ್ರೀಯುತ ಬೈರಪ್ಪನವರು ದೀಪ ಬೆಳಗುವುದರ ಮೂಲಕ ನೆರವೇರಿಸಿ ಜಿಲ್ಲೆಯಲ್ಲಿ ಯುವ ಶಕ್ತಿಯ ಪ್ರದರ್ಶನವನ್ನು ಸಮಾಜ ಸೇವೆಯಲ್ಲಿ ತೊಡಗುವುದರ ಮೂಲಕ ವ್ಯಕ್ತಪಡಿಸಿ ಉತ್ತಮ ಸಮಾಜ ನಿರ್ಮಾಣ ಮಾಡಲು ಕರೆ ನೀಡಿದರು.

ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪನವರು ವಹಿಸಿ ಮಾತನಾಡಿ ಎಲ್ಲಾ ಕಾಲೇಜುಗಳಲ್ಲಿ ರೋವರ್ಸ್ ಮತ್ತು ರೇಂಜರ್ಸ್ ತಂಡಗಳನ್ನು ತೆರೆದು ಸಕ್ರಿಯವಾಗಿ ಭಾಗವಹಿಸಿ ಜಿಲ್ಲೆಗೆ ಕೀರ್ತಿ ತಂದು ಕೊಡಬೇಕೆಂದರು.

ಮುಖ್ಯ ಅತಿಥಿಗಳಾಗಿ ಜಿಲ್ಲಾ ಖಜಾಂಚಿ ಶ್ರೀ ಬಸಪ್ಪಗೌಡ, ಸ್ಥಾನಿಕ ಆಯುಕ್ತರಾದ ಶ್ರೀ ಪ್ರಹ್ಲಾದರಾವ್, ಶ್ರೀ ತ್ಯಾಗರಾಜ್, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ವಿ.ಎಂ. ನಾರಾಯಣಸ್ವಾಮಿ, ಜಿಲ್ಲಾ ಪಂಚಾಯ್ತಿ ಕಾರ್ಯದರ್ಶಿ, ಶ್ರೀ ರಮೇಶ್ ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಹೆಚ್.ಎಂ. ಕೃಷ್ಣಪ್ಪ, ಕೋಲಾರ ತಾಲ್ಲೂಕಿನ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ಅಶ್ವತ್ಥನಾರಾಯಣ ಸ್ಥಳೀಯ ಸಂಸ್ಥೆ ಖಜಾಂಚಿ, ಶ್ರೀ ಮುನಿಸ್ವಾಮಿರೆಡ್ಡಿ ಭಾಗವಹಿಸಿದ್ದರು. ಶಿಬಿರದಲ್ಲಿ ಸ್ಕೌಟಿಂಗ್ ಇತಿಹಾಸ. ಗಂಟುಗಳು ಪ್ರಥಮ ಚಿಕಿತ್ಸೆ. ಪಥಸಂಚಲನ. ಶಿಬಿರಾಗ್ನಿ ವನವಿದ್ಯಾ ಸಂಕೇತಗಳು ರಾಷ್ಟ್ರೀಯ ಹಬ್ಬಗಳು ಬಾವುಟಗಳ ಪರಿಚಯ ಇತ್ಯಾದಿಗಳ ಬಗ್ಗೆ ತಿಳುವಳಿಕೆ ನೀಡಲಾಯಿತು. ಸೀತಿ ಬೆಟ್ಟದಲ್ಲಿ ಚಾರಣವನ್ನು ಹಮ್ಮಿಕೊಳ್ಳಲಾಗಿತ್ತು ಸ.ಕಿ.ಪ್ರಾ. ಶಾಲೆ ಚನ್ನಪ್ಪನ ಹಳ್ಳಿ ಶಾಲಾ ಆವರಣವನ್ನು ಸ್ವಚ್ಛಗೊಳಿಸುವುದರ ಮೂಲಕ ಶ್ರಮದಾನ ಕಾರ್ಯ ನಡೆಸಲಾಯಿತು.

ಕೋಲಾರ ಜಿಲ್ಲೆಯ ಖ್ಯಾತ ಶಸ್ತ್ರಚಿಕಿತ್ಸ ಡಾ॥ ರಮೇಶ್ ರವರು ಆರೋಗ್ಯ ಶಿಕ್ಷಣದ ಬಗ್ಗೆ ರೋವರ್‌ಗಳಲ್ಲಿ ಅರಿವು ಮೂಡಿಸಿ ಪ್ರತಿ ತಿಂಗಳಿಗೊಮ್ಮೆ ಕಾರ್ಯಕ್ರಮ ಹಮ್ಮಿಕೊಂಡು ಸಮಾಜಕ್ಕೆ ಸೇವೆ ಸಲ್ಲಿಸಿ ಎಂದು ತಿಳಿಸಿದರು.

## ರಾಯಚೂರು

ದಿನಾಂಕ 04-08-2014 ರಂದು ರಾಯಚೂರು ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಯಿತು. ಸಮಾವೇಶವನ್ನು ಶ್ರೀ ಜಿ. ತಿಮ್ಮಣ್ಣ ಅಧ್ಯಕ್ಷರು, ಜಿಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ರಾಯಚೂರು ಇವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.

ಈ ಸಂದರ್ಭದಲ್ಲಿ 2013-14ನೇ ಸಾಲಿನಲ್ಲಿ ಚತುರ್ಥ ಚರಣ, ಹೀರಕ್ ಪಂಖ್ ಮತ್ತು ರಾಜ್ಯ ಪುರಸ್ಕಾರ್ ಪಡೆದುಕೊಂಡ ಕಬ್ಸ್, ಬುಲ್ ಬುಲ್, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪ್ರಶಸ್ತಿ ಪತ್ರ ನೀಡಿ ಗೌರವಿಸಲಾಯಿತು. ಮುಖ್ಯ ಅತಿಥಿಗಳಾಗಿ ಡಾ॥ ಶಿಲಾಕುಮಾರಿ ದಾಸ್, ಶ್ರೀ ಶೇಷಗಿರಿರಾವ್ ಕುಲಕರ್ಣಿ, ಜಿಲ್ಲಾ ಆಯುಕ್ತರು(ಸ್ಕೌಟ್ಸ್)ಭಾಗವಹಿಸಿ ಮಾತನಾಡಿದರು. ಜಿಲ್ಲಾ ಪರಿಷತ್‌ಗೆ ಅವಿರೋಧವಾಗಿ ಉಪಾಧ್ಯಕ್ಷರಾಗಿ ಆಯ್ಕೆಯಾಗಿರುವ ಡಾ॥ ಶಿಲಾಕುಮಾರಿ ದಾಸ್ ಮತ್ತು ನೂತನವಾಗಿ ಜಿಲ್ಲಾ ಮುಖ್ಯ ಆಯುಕ್ತರಾಗಿ ಆಯ್ಕೆಯಾದ ಶ್ರೀ ಕೆ.ತಿಮ್ಮಯ್ಯ ಇವರನ್ನು ಅಭಿನಂದಿಸಿ ಸನ್ಮಾನಿಸಲಾಯಿತು. ಪ್ರಾಸ್ತಾವಿಕವಾಗಿ ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು (ಗೈ) ಮಾತನಾಡಿದರು. ಶ್ರೀ ಅಮರೇಗೌಡ ಪಾಟೀಲ್ ಕಾರ್ಯದರ್ಶಿಗಳು ಸ್ವಾಗತಿಸಿದರು. ಶ್ರೀ ರಾವುತರಾವ್ ಜಿಲ್ಲಾ ಸಂಘಟನಾ ಆಯುಕ್ತರು ನಿರೂಪಿಸಿದರು. ವೇದಿಕೆಯಲ್ಲಿ ಶ್ರೀ ಹೆಚ್. ಹನುಮಂತಪ್ಪ ಖಜಾಂಚಿಗಳು, ಶ್ರೀಮತಿ ದಾನಮ್ಮ ಜಿಲ್ಲಾ ಸ್ಥಾನಿಕ ಆಯುಕ್ತರು(ಗೈ), ಶ್ರೀಮತಿ ಎಮ್. ಸುಧಾ ಜಿಲ್ಲಾ ಸಹಾಯಕ ಆಯುಕ್ತರು(ಗೈ) ಉಪಸ್ಥಿತರಿದ್ದರು. ಇವರನ್ನು ಶ್ರೀಮತಿ ಕೆ. ಆಲಿಯಾ ಖಾನಂ ಜಂಟಿ ಕಾರ್ಯದರ್ಶಿಗಳು ವಂದಿಸಿದರು. ಸಮಾವೇಶದಲ್ಲಿ ಜಿಲ್ಲೆಯ 180 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

**********

ದಿನಾಂಕ 14-08-2014 ರಂದು ರಾಯಚೂರು ಜಿಲ್ಲಾಧಿಕಾರಿಗಳಾಗಿ ಅಧಿಕಾರ ವಹಿಸಿಕೊಂಡ ಮಾನ್ಯಶ್ರೀ ಶಶಿಕಾಂತ್ ಸೆಂಥಿಲ್, ಭಾ.ಆ.ಸೇ. ಇವರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ರಾಯಚೂರು ವತಿಯಿಂದ ಕಂಠವಸ್ತ್ರ ಹಾಗೂ ಹೂಗುಚ್ಚ ನೀಡಿ ಆತ್ಮೀಯವಾಗಿ ಸ್ವಾಗತಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಅಮರೇಗೌಡ ಪಾಟೀಲ್ ನೂತನ ಜಿಲ್ಲಾ ಆಯುಕ್ತರು (ಸ್ಕೌ) ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು (ಗೈ) ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಕೆ. ಆಲಿಯಾಖಾನಂ ಜಿಲ್ಲಾ ಖಜಾಂಚಿಗಳು, ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು, ಶ್ರೀ ಎನ್. ಶೇಖರ್ ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ) ಶ್ರೀ ಹೆಚ್. ವೀರನಗೌಡ ಕ್ವಾಟರ್ ಮಾಸ್ಟರ್ ಇವರುಗಳು ಉಪಸ್ಥಿತರಿದ್ದರು.

**********

ದಿನಾಂಕ 15-08-2014 ರಂದು ಜಿಲ್ಲಾ ಸಂಸ್ಥೆಯ ಪ್ರಧಾನ ಕಾರ್ಯಾಲಯದಲ್ಲಿ 68ನೇ ಸ್ವಾತಂತ್ರ್ಯೋತ್ಸವ ದಿನಾಚರಣೆಯ ಅಂಗವಾಗಿ ರಾಷ್ಟ್ರಧ್ವಜಾರೋಹಣ ಕಾರ್ಯ ಕ್ರಮವನ್ನು ಹಮ್ಮಿಕೊಳ್ಳಲಾಯಿತು. ಧ್ವಜಾರೋಹಣವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ತಿಮ್ಮಯ್ಯನವರು ನೆರವೇರಿಸಿದರು. ಈ ಸಂದರ್ಭದಲ್ಲಿ

ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ನಂತರ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಸಾಮೂಹಿಕ ಧ್ವಜಾರೋಹಣ ಕಾರ್ಯಕ್ರಮದ ಪಥಸಂಚಲನದಲ್ಲಿ ಸ್ಕೌಟ್ಸ್-ಗೈಡ್ ತಂಡಗಳು ಭಾಗವಹಿಸಿ ಉತ್ತಮ ಪ್ರದರ್ಶನ ನೀಡಿ ಜಹೀರಾಬಾದ್ ಸರ್ಕಾರಿ ಪ್ರೌಢ ಶಾಲೆಯ ಗೈಡ್ಸ್ ತಂಡ ಪ್ರಥಮ ಸ್ಥಾನ ಮತ್ತು ಸೇಂಟ್ ಮೇರಿಜ್ ಕಾನ್ವೆಂಟ್ ಶಾಲೆಯ ಮದರ್ ಥೆರೆಸಾ ಗೈಡ್ ತಂಡ್ ದ್ವಿತೀಯ ಸ್ಥಾನ ಪಡೆದುಕೊಂಡವು. ಉತ್ತಮ ಪ್ರದರ್ಶನ ನೀಡಿರುವ ತಂಡಗಳಿಗೆ ಸನ್ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರಾದ ಡಾ॥ ಶರಣ ಪ್ರಕಾಶ ಪಾಟೀಲ್ ಇವರು ಪ್ರಶಸ್ತಿ ಪತ್ರ ಮತ್ತು ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿದರು. ಈ ಸಂದರ್ಭದಲ್ಲಿ ರಾಯಚೂರು ಸಂಸದರಾದ ಮಾನ್ಯ ಶ್ರೀ ಬಿ.ವ್ಹಿ. ನಾಯಕ, ಶಾಸಕರಾದ ಮಾನ್ಯ ಡಾ॥ ಶಿವರಾಜ್ ಪಾಟೀಲ್, ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಶಶಿಕಾಂತ್ ಸೆಂಥಿಲ್, ಭಾ.ಆ.ಸೇ, ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಾದ ಶ್ರೀ ಎಮ್.ಎನ್. ನಾಗರಾಜ್, ಭಾ.ಪೋ.ಸೇ ಹಾಗೂ ಜಿ.ಪಂ. ಕಾರ್ಯನಿರ್ವಾಹಣ ಅಧಿಕಾರಿಗಳಾದ ಶ್ರೀಮತಿ ವಿ.ವಿ. ಜ್ಯೋತ್ಸನಾ ಭಾ.ಆ.ಸೇ. ಉಪಸ್ಥಿತರಿದ್ದರು.

## ಬೆಳಗಾವಿ

ದಿನಾಂಕ 14-07-2014 ರಿಂದ 17-07-2014ರ ವರೆಗೆ ಜಿಲ್ಲಾ ಸಂಸ್ಥೆ, ಬೆಳಗಾವಿ ವತಿಯಿಂದ ರೋವರ್ ಮತ್ತು ರೇಂಜರ್‌ಗಳಿಗೆ ಜಿಲ್ಲಾ ಮಟ್ಟದ ಪ್ರವೀಣ್ ಪರೀಕ್ಷಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಜಿ.ಬಿ. ಮನ್ನಿಕೇರಿ, ಜಿಲ್ಲಾ ಸ್ಕೌಟ್ ಆಯುಕ್ತರು ಹಾಗೂ ಪ್ರಾಚಾರ್ಯರು ಡಯಟ್ ಮಣ್ಣೂರ ಬೆಳಗಾವಿ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಂಬೋಜಿ, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ರೋವರ್ ಸ್ಕೌಟ್ ಲೀಡರಾದ ಶ್ರೀ ಆರ್.ಎಚ್. ಗಡದನ್ನವರ, ಶ್ರೀಮತಿ ಜಿ.ಬಿ. ಪಾಟೀಲ, ಶಿಬಿರದ ನಾಯಕರಾದ ಶ್ರೀ ವಿ.ಎ. ಸಾತಪುತೆ ರೋವರ್ ಸ್ಕೌಟ್ ಲೀಡರ್ ಸಹಾಯಕರಾಗಿ ಶ್ರೀ ಆರ್.ಆರ್. ಅಲಕುಂಟೆ ಜಿಲ್ಲಾ ಸಂಘಟಕರಾದ ಶ್ರೀ ಡಿ.ಬಿ. ಅತ್ತಾರ, ಶ್ರೀ ವಿಠ್ಠಲ ಎಸ್.ಬಿ. ಹಾಗೂ ಜಿಲ್ಲಾ ಸಂಸ್ಥೆ ಎಲ್ಲ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶಿಬಿರದಲ್ಲಿ ಒಟ್ಟು 52 ರೋವರ್‌ಗಳು ಹಾಗೂ 09 ರೇಂಜರ್‌ಗಳು ವಿವಿಧ ಕಾಲೇಜುಗಳಿಂದ ಆಗಮಿಸಿದ್ದರು.

ದಿನಾಂಕ 16-07-2014 ರಂದು ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳಿಗೆ ಉಚಿತ ಆರೋಗ್ಯ ತಪಾಸಣಾ ಕಾರ್ಯಕ್ರಮವನ್ನು ನಗರದ ಆರೋಗ್ಯ ಕೇಂದ್ರ ಚೌಗುಲೆವಾಡಿಯ ಬೆಳಗಾವಿ ಇವರ ಸಹಯೋಗದಲ್ಲಿ ಆಯೋಸಲಾಗಿತ್ತು. ತಪಾಸಣಾ ಕಾರ್ಯವನ್ನು ಡಾ॥ ರಮೇಶ ನೀರಲಗಟ್ಟಿ ಹಾಗೂ ಅವರ ಸಿಬ್ಬಂದಿಯಾದ ಶ್ರೀಮತಿ ಪೂಜಾರ ಇವರು ನೆರವೇರಿಸಿ ಕೊಟ್ಟರು. ಡಾ॥ ರಮೇಶ ನೀರಲಗಟ್ಟಿ ವಿವಿಧ ಸಾಂಕ್ರಾಮಿಕ ರೋಗಗಳ ಗುಣಲಕ್ಷಣ ಹಾಗೂ ಮುನ್ನೆಚ್ಚರಿಕೆಯ ಬಗ್ಗೆ ಸಂಪೂರ್ಣವಾಗಿ ತಿಳಿಸಿದರು. ದಿನಾಂಕ 17-07-2014 ರಂದು ಮುಂಜಾನೆ 7.30ಕ್ಕೆ ಸರ್ವಧರ್ಮ ಪ್ರಾರ್ಥನೆ ನಡೆಯಿತು.

**********

ದಿನಾಂಕ 24-07-2014 ರಂದು ಸರಕಾರಿ ಪ್ರೌಢಶಾಲೆ ಕರೀಕಟ್ಟೆ ಇಲ್ಲಿ ಸ್ಕೌಟ್ ಘಟಕದ ಉದ್ಘಾಟನಾ ಸಮಾರಂಭವು ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಗ್ರಾಮಪಂಚಾಯತ ಅಧ್ಯಕ್ಷರಾದ ಶ್ರೀ ಪಟ್ಟಣಶೆಟ್ಟಿ ವಹಿಸಿದ್ದರು. ಶ್ರೀ ಜಗದೀಶ ಕೆ.ಎಸ್. ಗ್ರಾಮ ಪಂಚಾಯತ ಅಭಿವೃದ್ಧಿ ಅಧಿಕಾರಿ ಉದ್ಘಾಟಕರಾಗಿ ಆಗಮಿಸಿದ್ದರು. ಶಾಲೆಯ ಮುಖ್ಯೋಪಾಧ್ಯಯಿನಿ ಶ್ರೀಮತಿ ಜಡ್.ಎ. ಶಹಾಪೂರಿ, ಗ್ರಾ.ಪಂ. ಉಪಾಧ್ಯಕ್ಷರು, ಸದಸ್ಯರು ಎಸ್.ಡಿ.ಎಂ.ಸಿ., ಅಧ್ಯಕ್ಷರು, ಸದಸ್ಯರುಗಳು, ಜಿಲ್ಲಾ ಸಂಘಟಕ, ವಿಠ್ಠಲ. ಎಸ್. ಬಾಚಗುಂಡಿ ಉಪಸ್ಥಿತರಿದ್ದರು. ಶಿಕ್ಷಕರಾದ ಶ್ರೀ ಗರಗದ ಸ್ವಾಗತಿಸಿದರು. ಶ್ರೀ ಷಡಕ್ಷರಪ್ಪ ವಂದಿಸಿದರು.

***********

ದಿನಾಂಕ 19-07-2014 ರಿಂದ 21-07-2014 ರ ವರೆಗೆ ದೊಡ್ಡಬಳ್ಳಾಪುರದ ಶ್ರೀ ಗುರುರಾಜ ಕಲ್ಯಾಣ ಮಂಟಪದಲ್ಲಿ ನಡೆದ ರಾಜ್ಯಮಟ್ಟದ ಯೋಗ ಸ್ಪರ್ಧೆಯಲ್ಲಿ ಬೆಳಗಾವಿ ಜಿಲ್ಲೆಯ ಜೈನ ಹೆರಿಟೇಜ್ ಶಾಲೆ, ಎಂ.ವಿ. ಹೆರವಾಡಕರ ಶಾಲೆ ಹಾಗೂ ಜೋಶಿ ಸೆಂಟ್ರಲ್ ಶಾಲೆಗಳಿಂದ ಒಟ್ಟು 50 ಕಬ್ ಬುಲ್ ಬುಲ್‌ಗಳು ಭಾಗವಹಿಸಿದ್ದರು.

**********

ದಿನಾಂಕ 25-07-2014 ರಂದು ಬಿ.ಸಿ.ಎಂ. ಇಲಾಖೆಯ ಅಧೀನದಲ್ಲಿರುವ ಮೊರಾರ್ಜಿ ದೇಸಾಯಿ ವಸತಿಗಳ ಪ್ರಾಂಶುಪಾಲರ ಹಾಗೂ ವಸತಿ ಮೇಲ್ವಿಚಾರಕರುಗಳ ಸಭೆಯು ಇಲಾಖೆಯ ಸಭಾಭವನದಲ್ಲಿ ಶ್ರೀ ಪ್ರಕಾಶ, ಹರಗಾಪೂರ ಜಿಲ್ಲಾಧಿಕಾರಿಗಳು ಹಿಂದುಳಿದ ವರ್ಗಗಳ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ ಬೆಳಗಾವಿ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಜಿಲ್ಲಾ ಸಂಘಟಕರಾದ ಶ್ರೀ ಡಿ.ಬಿ. ಅತ್ತಾರ ಸ್ಕೌಟಿಂಗ್ ಶಿಕ್ಷಣದ ಮಾಹಿತಿಯನ್ನು ತಿಳಿಸಿಕೊಟ್ಟರು.

************

ದಿನಾಂಕ 31-07-2014 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಜಿಲ್ಲೆಯ ಎಲ್ಲಾ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳ ಸಭೆಯನ್ನು ಆಯೋಜಿಸಲಾಗಿತ್ತು. ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ ಹುಡೇದ ಇವರು ವಹಿಸಿದ್ದರು. ಸದರಿ ಸಭೆಯಲ್ಲಿ 2013-14ನೇ ಸಾಲಿನ ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಶಸ್ತಿ ಪತ್ರಗಳ ವಿತರಣೆಯನ್ನು ಮಾಡಲಾಯಿತು.

ಸ್ಕೌಟ್ ಮಾಸ್ಟರ್‌ಗಳಿಗೆ ಹಿಮಾಲಯ ವೃಕ್ಷಮಣಿ ಪ್ರಮಾಣ ಪತ್ರ ಹಾಗೂ ಮಣಿಗಳನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಜೆ.ಬಿ. ಮನ್ನಿಕೇರಿ ಇವರುಗಳು ವಿತರಿಸಿ ಸನ್ಮಾನಿಸಿದರು. ಶ್ರೀ ಎಸ್.ಎಂ. ನದಾಫ, ಜಂಟಿ ಕಾರ್ಯದರ್ಶಿ, ಜಿಲ್ಲಾ ಸಂಸ್ಥೆ, ಬೆಳಗಾವಿ, ಜಿಲ್ಲಾ ಸಂಘಟಕರಾದ ಶ್ರೀ ವಿಠ್ಠಲ ಎಸ್. ಬಾಚಗುಂಡಿ, ಶ್ರೀ ಡಿ.ಬಿ. ಅತ್ತಾರ ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಉಪಸ್ಥಿತರಿದ್ದರು

**********

ದಿನಾಂಕ 15-08-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಇಲ್ಲಿ 68ನೇ ಸ್ವಾತಂತ್ರ್ಯೋತ್ಸವ ದಿನಾಚರಣೆಯ ನಿಮಿತ್ತ ಧ್ವಜಾರೋಹಣ ಕಾರ್ಯಕ್ರಮವನ್ನು ಆಚರಿಸಲಾಯಿತು. ಧ್ವಜಾರೋಹಣವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ ರವರು, ನೆರವೇರಿಸಿದರು. ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ

ಶ್ರೀ ಟಿ.ಡಿ. ಕಾಂಬೋಜಿ ಕಾರ್ಯಕ್ರಮವನ್ನು ಉದ್ದೇಶಿಸಿ ಮಾತನಾಡಿದರು. ಕಾರ್ಯಕ್ರಮದಲ್ಲಿ ಸ.ಶ.ಕಿ.ಪ್ರಾ. ಶಾಲೆ ನಂ. 36 ಟಿಳಕವಾಡಿ ಶಾಲೆಯಿಂದ 20 ಕಬ್, ಬುಲ್‌ಬುಲ್‌ಗಳು ಭಾಗವಹಿಸಿದ್ದರು. ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಶೀ ವಿಠ್ಠಲ ಎಸ್. ಬಾಚಗುಂಡಿ ಉಪಸ್ಥಿತರಿದ್ದರು. ಶ್ರೀ ಡಿ.ಬಿ. ಅತ್ತಾರ ಸ್ವಾಗತಿಸಿ ವಂದಿಸಿದರು.

68ನೇ ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ಜಿಲ್ಲಾಡಳಿತದಿಂದ ಸಿ.ಪಿ.ಈ.ಡಿ., ಮೈದಾನದಲ್ಲಿ ಆಯೋಜಿಸಿದ್ದ ಸಾಮೂಹಿಕ ಪಥ ಸಂಚಲನದಲ್ಲಿ ನಗರದ ಕೆ.ಎಲ್.ಎಸ್.ಶಾಲೆ, ಅಮೃತ ವಿದ್ಯಾಲಯ, ಶ್ರೀ ಸಿದ್ಧರಾಮೇಶ್ವರ ಪ್ರೌಢಶಾಲೆ ಸೆಂಟೆ ಜೋಸೆಫ್ ಪ್ರೌಢಶಾಲೆ, ಮಹಿಳಾ ವಿದ್ಯಾಲಯ ಪ್ರೌಢಶಾಲೆಗಳ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಇವುಗಳಲ್ಲಿ ವನಿತಾ ವಿದ್ಯಾಲಯ ಪ್ರೌಢಶಾಲೆಯ ಗೈಡ್ ಕಂಪನಿಯು ಉತ್ತಮ ಪ್ರದರ್ಶನ ನೀಡಿ "ದ್ವಿತೀಯ" ಸ್ಥಾನವನ್ನು ಪಡೆದುಕೊಂಡಿದೆ.

## ಬೀದರ್

ದಿನಾಂಕ 26-07-2014 ರಂದು ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು ಸಾರ್ವಜನಿಕ ಶಿಕ್ಷಣ ಇಲಾಖೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮತ್ತು ಭಾರತ್ ಸ್ಕೌಟ್ಸ್ - ಗೈಡ್ಸ್ ಜಿಲ್ಲಾ ಸಂಸ್ಥೆ ಇವರುಗಳ ಸಂಯುಕ್ತ ಆಶ್ರಯದಲ್ಲಿ ಬೀದರ್ ಜಿಲ್ಲೆಯ 'ರಂಗಮಂದಿರ'ದಲ್ಲಿ ಶಾಲೆ ಬಿಟ್ಟ ಮಕ್ಕಳನ್ನು ಮರಳಿ ಶಾಲೆಗೆ ತರುವ ಬಗ್ಗೆ "ಅರಿವು ನೆರವು" ಕಾರ್ಯಾಗಾರ ನಡೆಯಿತು. ಕಾರ್ಯಾಗಾರದಲ್ಲಿ 'ಡಾನ್‌ಬಾಸ್ಕೊ' ನಿರಾಶ್ರಿತ ಮಕ್ಕಳ ಪುನರ್ವಸತಿ ಶಾಲೆಯ ಮಕ್ಕಳು, ಆಶಾ ಕಾರ್ಯಕರ್ತೆಯರು, ಪ್ರಾಥಮಿಕ-ಪ್ರೌಢಶಾಲೆಯ ವಿಜ್ಞಾನ ಶಿಕ್ಷಕರು-ಮುಖ್ಯೋಪಾಧ್ಯಾಯರು ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದರು.

ಕಾರ್ಯಾಗಾರದಲ್ಲಿ ಮಕ್ಕಳ ಅಪೌಷ್ಠಿಕತೆ ತಡೆಗಟ್ಟುವ ಕುರಿತು ಸಮಗ್ರ ಕಾರ್ಯಯೋಜನೆ, ಶಾಲೆಬಿಟ್ಟಮಕ್ಕಳನ್ನು ಮೂಲವಾಹಿನಿಗೆ ಕರೆತರುವುದು ಬಾಲ್ಯದಿಂದಲೆ ಪೌಷ್ಠಿಕತೆ ಕುರಿತ ಅರಿವು ಮೂಸಿಡುವ ಗೋಷ್ಠಿ ಉಪನ್ಯಾಸ ನಡೆದವು. ಕಾರ್ಯಕ್ರಮದಲ್ಲಿ ನಗರದ ಯುನಿಕ್ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್ ಮಕ್ಕಳು ಭಾಗವಹಿಸಿದ್ದರು.

************

ದಿನಾಂಕ 26-07-2014 ಅರಣ್ಯ ಇಲಾಖೆ, ಬೀದರ್ ಸಂಘಟಿಸಿದ "ಲಕ್ಷ ವೃಕ್ಷ ಆಚರಣೆ" ಕಾರ್ಯಕ್ರಮದಲ್ಲಿ ಜಿಲ್ಲಾ ನ್ಯಾಯಾಲಯ ಆವರಣ, ವೈದ್ಯಕೀಯ ವಿಜ್ಞಾನ ಸಂಸ್ಥೆ, ಶಾಲಾ ಕಾಲೇಜುಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಸಸಿನೆಟ್ಟು "ಮನೆಗೊಂದು ಮರ" ವಿತರಣೆಯಲ್ಲಿ ಭಾಗಿಯಾದರು.

***********

ದಿನಾಂಕ 10-07-2014 ರಂದು ಬೀದರ್ ಜಿಲ್ಲೆಯ ಔರಾದ ಪಟ್ಟಣದಲ್ಲಿ ಸ್ಕೌಟರ್-ಗೈಡರ್ ಸಮಾವೇಶ ನಡೆಯಿತು. ಔರಾದ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಶಶಿಕಾಂತ ಮರ್ತುಳೆ, ತಾಲ್ಲೂಕ ಸ್ಕೌಟ್-ಗೈಡ್ ಸಮಾವೇಶವನ್ನು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ 32 ಸ್ಕೌಟರ್-ಗೈಡರ್ ಭಾಗವಹಿಸಿದ್ದರು. ಅಮರೇಶ್ವರ ಕನ್ನಡ ಪ್ರೌಢಶಾಲೆಯ ಸಭಾಂಗಣದಲ್ಲಿ ನಡೆದ ಕಾರ್ಯಕ್ರಮದಲ್ಲಿ ವಾರ್ಷಿಕ ಕ್ರಿಯಾಯೋಜನೆ ಅನುಷ್ಠಾನ, ಮಕ್ಕಳ ಚಟುವಟಿಕೆ, ಜಾಂಬೊರೆಟ್, ಜಾಂಬೂರಿ, ತೃತೀಯ ಸೋಪಾನ ಪರೀಕ್ಷಾ ಶಿಬಿರಗಳಂಥ ವಿಷಯಗಳು ಚರ್ಚೆಯಾದವು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲೆಯ ಮುಖ್ಯ ಗುರು ಶ್ರೀ ಶಿವರಾಜ ರೊಟ್ಟೆ ವಹಿಸಿದ್ದರು. ಜಂಟಿ ಕಾರ್ಯದರ್ಶಿ, ಶ್ರೀ ಶಿಕುಮಾರ ಮೆಣಸೆ, ತಾಲೂಕಾ ಸ್ಕೌಟ್ ನೋಡಲ್ ಅಧಿಕಾರಿಗಳು ಭಾಗವಹಿಸಿದ್ದರು. ಶ್ರೀ ಮಲ್ಲಿಕಾರ್ಜುನ ಟಂಕಸಾಲೆ ನಿರೂಪಿಸಿದರು. ಶ್ರೀ ವೆಂಕಟರಾವ ಡೊಂಬಳೆ ಸ್ವಾಗತಿಸಿದರು. ಶ್ರೀ ಬಾಬುರಾವ ನಿಂಬೂರೆ ಎಲ್ಲರನ್ನು ಅಭಿನಂದಿಸಿದರು.

***********

ದಿನಾಂಕ 08-07-2014 ರಂದು ತಾಲೂಕು ಮಟ್ಟದ ಸ್ಕೌಟರ್ ಗೈಡರ್ ಶಿಕ್ಷಕರ ಸಮಾವೇಶ ನಡೆಯಿತು. ಜಿಲ್ಲಾ ಸಂಘಟಕರಾದ ಶ್ರೀ ಶಿವಕುಮಾರ ಹಾಲಹಳ್ಳಿ ಸಮಾವೇಶವನ್ನು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ತಾಲೂಕು ದೈಹಿಕ ಶಿಕ್ಷಣಾಧಿಕಾರಿ ಶ್ರೀ ಪ್ರಕಾಶ ಮೋರೆ ಭಾಗವಹಿಸಿದ್ದರು. ಸಂಸ್ಥೆಯ ಮುಖ್ಯ ಗುರುಗಳಾದ ಶ್ರೀ ಶಿವರಾಜಯ್ಯಾಸ್ವಾಮಿ ಎಲ್ಲರನ್ನು ಸ್ವಾಗತಿಸಿದರು. ತಾಲೂಕು ನೋಡಲ್ ಅಧಿಕಾರಿ ಶ್ರೀ ಅನಿಲ ಶಾಸ್ತ್ರಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಅನಂತ ಭಂಡಿ ಹಾಗೂ ಶ್ರೀ ಬಾಬುರಾವ ನಿಂಬೂರೆ ಭಾಗವಹಿಸಿದರು.

************

ಬಸವಕಲ್ಯಾಣ ಪಟ್ಟಣದ ಸರ್ಕಾರಿ ಆಸ್ಪತ್ರೆಯ ಮುಖ್ಯ ವೈದ್ಯಾಧಿಕಾರಿ ಡಾ॥ ಜಿ.ಎಸ್. ಭುರಾಳೆ ರವರು ಮಲೇರಿಯಾ ನಿಯಂತ್ರಣ ಮಾಸಾಚರಣೆಯ ಅಂಗವಾಗಿ ಸಾರ್ವಜನಿಕ ಜಾಗೃತಿ ರ್‍ಯಾಲಿಯನ್ನು ಉದ್ಘಾಟಿಸಿ, ರ್‍ಯಾಲಿಗೆ ಚಾಲನೆ ನೀಡಿದರು. ಸಾರ್ವಜನಿಕ ಆಸ್ಪತ್ರೆ ಬಸವಕಲ್ಯಾಣ ಹಾಗೂ ಶಾಂತಿನಿಕೇತನ ಶಾಲೆಯ ರವೀಂದ್ರನಾಥ ಟ್ಯಾಗೋರ್ ಸ್ಕೌಟ್ ಟ್ರೂಪ್ ಸಂಯುಕ್ತ ಆಶ್ರಯದಲ್ಲಿ ಈ ಕಾರ್ಯಕ್ರಮ ಸಂಘಟಿಸಲಾಗಿತ್ತು.

ರವೀಂದ್ರನಾಥ ಟ್ಯಾಗೂರ ಸ್ಕೌಟ್ಸ್ ಟ್ರೂಪ್‌ನ ಬಾಲಕರು ಸಾರ್ವಜನಿಕರಿಗೆ ಮಾಹಿತಿ ಮತ್ತು ಮುಂಜಾಗ್ರತಾ ಕ್ರಮಗಳ ಭಿತ್ತಿಪತ್ರ ಪ್ರಚಾರ ನೀಡಿದರು. ತಾಲ್ಲೂಕು ವೈದ್ಯಾಧಿಕಾರಿ ಡಾ॥ ಹೆಮಸಿಂಗ್ ಜಾಧವ, ಡಾ. ಗಿರೀಶ, ಡಾ. ಪೂಜಾ, ಡಾ. ಅಶ್ವಿನಿ ಮತ್ತು ಆರೋಗ್ಯ ನಿರೀಕ್ಷಕರು, ಲಕ್ಷಣ ಜಮ್ಮು ತಾಲೂಕಾ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

***********

ದಿನಾಂಕ : 10-07-2014 ರಂದು ಬೀದರ ಜಿಲ್ಲೆಯ ಹುಮನಾಬಾದ ಸ್ಥಳೀಯ ಸಂಸ್ಥೆಯು ಒಂದು ದಿನದ ಸ್ಕೌಟರ್ಸ್-ಗೈಡರ್ಸ್ ಕಾರ್ಯಾಗಾರವನ್ನು ಬಿ.ಆರ್.ಸಿ. ಕಛೇರಿಯಲ್ಲಿ ಹಮ್ಮಿಕೊಂಡಿತ್ತು. ಕಾರ್ಯಾಗಾರದಲ್ಲಿ 28 ಸ್ಕೌಟರ್ಸ್ 8 ಗೈಡರ್ಸ್ ಭಾಗವಹಿಸಿದರು. ಜಿಲ್ಲಾ ತರಬೇತಿ ಆಯುಕ್ತ ಶ್ರೀ ಬಾಬುರಾವ ನಿಂಬೂರೆ ರವರು ಕಾರ್ಯಾಗಾರದಲ್ಲಿ ಸ್ಕೌಟಿಂಗ್ ಚಳುವಳಿಯ ಇತಿಹಾಸ, ಮೂಲತತ್ವಗಳು ಮಕ್ಕಳ ಪ್ರಗತಿಪರ ಶಿಕ್ಷಣ ಸ್ಕೌಟ್ ಮಾಸ್ಟರ್‌ಗಳ ಮುಂದುವರೆದ ತರಬೇತಿಗಳು, ಮುಂತಾದ ವಿಷಯಗಳ ಮಾಹಿತಿ ನೀಡಿದರು. ಕಾರ್ಯಕ್ರಮದಲ್ಲಿ ಬಿ.ಆರ್.ಪಿ. ಅಧಿಕಾರಿಗಳು, ಸ್ಥಳೀಯ ಸಂಸ್ಥೆ ಹುಮನಾಬಾದ ಹಾಗೂ ಬೀದರ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

*************

ದಿನಾಂಕ 16-07-2014 ರಂದುಬೀದರ ಜಿಲ್ಲೆಯ ದಿ ಮಿಲೇನಿಯಂ ಪಬ್ಲಿಕ್ ಶಾಲೆಯಲ್ಲಿ ವಿಶ್ವ ಜನಸಂಖ್ಯಾ ದಿನಾಚರಣೆಯನ್ನು ಆಚರಿಸಲಾಯಿತು ಕಾರ್ಯಕ್ರಮದಲ್ಲಿ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿ ಶ್ರೀ ದೇಶಪ್ಪ, ಮುಖ್ಯ

ಅತಿಥಿಗಳಾಗಿ ಹಾಗೂ ಅಧ್ಯಕ್ಷರಾಗಿ ಶ್ರೀ ರಾಜಶೇಖರ ಗಾಧಾ ಭಾಗವಹಿಸಿದರು. ಕಾರ್ಯಕ್ರಮದಲ್ಲಿ ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ರೇವಣಪ್ಪ ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಉಮಾ ರವರು ಮತ್ತು ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

ಜನಸಂಖ್ಯಾ ಸ್ಫೋಟಕ್ಕೆ ಕಾರಣಗಳು, ಮಿತಿಮೀರಿದ ಜನಸಂಖ್ಯಾ ದುಷ್ಪರಿಣಾಮಗಳು ಮತ್ತು ಪರಿಹಾರೋಪಾಯಗಳು, ಕುರಿತು ಗೋಷ್ಠಿ ಉಪನ್ಯಾಸ ನಡೆದವು.

*************

ದಿನಾಂಕ 15-08-2014 ರಂದು ಬೀದರ್ ಜಿಲ್ಲೆಯ ನೆಹರು ಕ್ರೀಡಾಂಗಣದಲ್ಲಿ ನಡೆದ 68ನೇ ಸ್ವಾತಂತ್ರ್ಯೋತ್ಸವ ದಿನಾಚರಣೆಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ ಪ್ರಶಸ್ತಿ ಗಳಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಉಸ್ತುವಾರಿ ಸಚಿವೆ ಶ್ರೀಮತಿ ಉಮಾಶ್ರೀ, ಮಾಜಿ ಶಾಸಕ ಶ್ರೀ ಗುರುಪಾದಪ್ಪ ನಾಗಮಾರಪಳ್ಳಿ ಜಿಲ್ಲಾಧಿಕಾರಿ ಡಾ॥ ವ.ಸ. ಜಾಫರ್ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

***********

ದಿನಾಂಕ 15-08-2014 ರಂದು ಸ್ಥಳೀಯ ಸಂಸ್ಥೆ ಬಸವ ಕಲ್ಯಾಣದಲ್ಲಿ ನಡೆದ 68ನೇ ಸ್ವಾತಂತ್ರ್ಯೋತ್ಸವ ಆಚರಿಸಲಾಯಿತು. ಸಮಾರಂಭದಲ್ಲಿ ಬಸವಕಲ್ಯಾಣ ಪ್ರಾದೇಶಿಕ ಆಯುಕ್ತೆ ಶ್ರೀಮತಿ ಹೆಬ್ಸಿಬಾ ರಾಣಿ ಕೋರ್ಲ್‌ಪಾಟಿ ಧ್ವಜಾರೋಹಣ ಮಾಡಿದರು. ನಂತರ ನಡೆದ ಪಥಸಂಚಲನದಲ್ಲಿ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್ ಟ್ರೂಪ್-ಗೈಡ್ಸ್ ಕಂಪನಿ ಭಾಗವಹಿಸಿದ್ದರು. ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಅನಂತ ವಿ.ಎಂ.ಡಿ, ಶ್ರೀ ಅನೀಲ್ ಶಾಸ್ತ್ರಿ, ಶ್ರೀ ಪರಮೇಶ್ವರ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದರು.

## ಕೊಪ್ಪಳ

ದಿನಾಂಕ 28-07-2014 ರಂದು ಜಿಲ್ಲಾಧಿಕಾರಿಗಳ ಸಭಾಂಗಣದಲ್ಲಿ ಜಿಲ್ಲಾ ಕಾರ್ಯಕಾರಿಣಿ ಸಭೆಯನ್ನು ನಡೆಸಲಾಯಿತು. ಈ ಸಭೆಯ ಅಧ್ಯಕ್ಷತೆಯನ್ನು ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಆರ್.ಆರ್. ಜನ್ನು ವಹಿಸಿದ್ದರು. ಹೆಚ್ಚುವರಿ ಜಿಲ್ಲಾಧಿಕಾರಿಗಳಾದ ಶ್ರಿ ಸುರೇಶ ಹಿಟ್ಯಾಳ, ಕೊಪ್ಪಳ ಜಿಲ್ಲೆಯ ಸಂಯೋಜಕರಾದ ಶ್ರೀಮತಿ ಸರೋಜ, ಜಿಲ್ಲೆಯ ಅನುದಾನ ರಹಿತ ಶಾಲಾ ಸಂಘದ ಪದಾಧಿಕಾರಿಗಳು, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಗು ಉಪನಿರ್ದೇಶಕರ ಕಾರ್ಯಾಲಯದಿಂದ ಪ್ರತಿನಿಧಿಗಳು ಭಾಗವಹಿಸಿದ್ದರು.

************

ದಿನಾಂಕ 15-08-2014 ರಂದು 68ನೇ ಸ್ವಾತಂತ್ರ್ಯೋತ್ಸವವನ್ನು ಜಿಲ್ಲಾ ಕ್ರೀಡಾಂಗಣದಲ್ಲಿ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಆಚರಿಸಲಾಯಿತು.

ಜಿಲ್ಲಾ ಕ್ರೀಡಾಂಗಣದಲ್ಲಿ ಟ್ರಿನಿಟಿ - ಆಂಗ್ಲ ಪಬ್ಲಿಕ್ ಶಾಲೆಯ ಸ್ಕೌಟ್ಸ್‌ಗಳು ಜಿಲ್ಲೆಗೆ ಪ್ರಥಮ ಬಹುಮಾನ ಪಡೆದಿರುತ್ತಾರೆ ಹಾಗೂ ಶಾರದಾ ಶಾಲೆಯ ಸ್ಕೌಟ್ಸ್‌ಗಳು ಕವಾಯತು ಸಾಹಸಮಯ ಪ್ರದರ್ಶನದಲ್ಲಿ ಪ್ರಥಮ ಬಹುಮಾನ ವನ್ನು ಪಡೆದಿರುತ್ತಾರೆ.

## ಬಿಜಾಪುರ

ದಿನಾಂಕ 15-08-2014 ರಂದು ಜಿಲ್ಲಾ ಸಂಸ್ಥೆ ಕಾರ್ಯಾಲಯದಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯ ಜಿಲ್ಲಾ ಮುಖ್ಯ ವರದಿಗಾರರು ಹಾಗೂ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ವಾಸುದೇವ ಹೆರಕಲ್ ಅವರು ಧ್ವಜಾರೋಹಣ ಮಾಡಿದರು. ತ್ಯಾಗ ಬಲಿದಾನದಿಂದ ಬಂದ ಈ ಸ್ವಾತಂತ್ರ್ಯ ನಾವು ರಕ್ಷಣೆ ಮಾಡಿಕೊಂಡು ಹೋಗುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ ಎಂದು ಹೇಳಿದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ಧಣ್ಣ ಸಕ್ರಿ, ಸೇಂಟ್ ಜೋಸೆಫ್ ಪ್ರೌಢಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

*************

ಅಂಬೇಡ್ಕರ್ ಕ್ರೀಡಾಂಗಣದಲ್ಲಿ ಏರ್ಪಡಿಸಿದ ಸಾಮೂಹಿಕ ಸ್ವಾತಂತ್ರ್ಯ ದಿನಾಚರಣೆ ಸಂದರ್ಭದಲ್ಲಿ ಮಾನ್ಯ ಜಲಸಂಪನ್ಮೂಲ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಎಂ.ಬಿ. ಪಾಟೀಲ ಅವರು ಧ್ವಜಾರೋಹಣ ಮಾಡಿದರು. ಸೇಂಟ್ ಜೋಸೆಪ್ಸ್ ಪ್ರೌಢಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಆಕರ್ಷಕ ಪಥಸಂಚಲನ ಮಾಡಿದರು. ಮಾರ್ಗದರ್ಶಕರಾಗಿ ಲೇಡಿ ಸ್ಕೌಟ್ಸ್ ಮಾಸ್ಟರ್ ಶ್ರೀಮತಿ ಜಿ.ಆರ್. ಬಿಸನಾಳ ಅವರು ಕಾರ್ಯನಿರ್ವಹಿಸಿದರು.

*************

ದಿನಾಂಕ 19-07-2014 ರಂದು ಎಚ್.ಪಿ.ಎಸ್. ಐನಾಪೂರ ಶಾಲೆಯಲ್ಲಿ ಮದರ್ ಥೆರೆಸಾ ಗೈಡ್ ಕಂಪನಿಯ ಗೈಡ್‌ಗಳು ಕುಷ್ಟ ರೋಗಿಗಳ ಜಾಗೃತಿ ಕಾಯಕ್ರಮ ಏರ್ಪಡಿಸಿದ್ದರು. ಇದರ ಅಂಗವಾಗಿ ಅವರು ಮನೆಗಳಿಗೆ ಬೇಟಿ ನೀಡಿ ಕುಷ್ಟ ರೋಗಿಗಳು ಮತ್ತು ಅದಕ್ಕೆ ಸಂಬಂಧ ಪಟ್ಟ ರೋಗಳು ಕಂಡು ಬಂದವರನ್ನು ಕರೆತಂದು ಡಾ॥ ಅರ್ಚನಾ ಸಿಂಧಗಿಕರ್ ಅವರನ್ನು ಬೇಟಿ ಮಾಡಿಸಿದರು. ವೈದ್ಯರು ಎಲ್ಲ ರೋಗಿಗಳು ಮತ್ತು ಗೈಡ್‌ಗಳನ್ನು ಉದ್ದೇಶಿಸಿ ಮಾತನಾಡಿದರು.

## ಬಳ್ಳಾರಿ

ದಿನಾಂಕ 30-06-2014 ರಂದು ಬಳ್ಳಾರಿ ತಾಲೂಕಿನ ಒಂದು ದಿನದ ಸ್ಕೌಟರ್ಸ್ ಸಮಾವೇಶವು ಬಿ.ಡಿ.ಎ.ಎ. ಮೈದಾನದಲ್ಲಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಕಛೇರಿಯಲ್ಲಿ ನಡೆಸಲಾಯಿತು. 65 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಶ್ರೀ ವಿಜಯ ಎ.ಎಲ್.ಟಿ.(ಎಸ್.) ದಾವಣಗೆರೆ ಶ್ರೀ ಎಂ. ನಾಗರಾಜ ಪ್ರೀ-ಎ.ಎಲ್.ಟಿ.(ಎಸ್) ಇವರು ಸ್ಕೌಟರ್ಸ್-ಗೈಡರ್ಸ್ ಗಳಿಗೆ ಮಾಹಿತಿ ನೀಡಿದರು.

************

ದಿನಾಂಕ 01-07-2014 ರಂದು ಹೆಚ್.ಬಿ. ಹಳ್ಳಿ ತಾಲ್ಲೂಕಿನ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ರಾಷ್ಟ್ರೋತ್ಥಾನ ಸ. ಪ್ರೌಢಶಾಲೆಯಲ್ಲಿ ಏರ್ಪಡಿಸಲಾಯಿತು. 23 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

************

ದಿನಾಂಕ 02-07-2014ರಂದು ಬಿ.ಆರ್.ಸಿ. ಕಟ್ಟಡ ಕೂಡ್ಲಿಗಿಯಲ್ಲಿ ಕೂಡ್ಲಿಗಿ ತಾಲ್ಲೂಕಿನ ಸ್ಕೌಟರ್ಸ್ ಗೈಡರ್ಸ್ ಸಮಾವೇಶ ಹಮ್ಮಿಕೊಳ್ಳಲಾಗಿತ್ತು. 49 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು. ಈ ಸಮಾವೇಶದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ

ಶ್ರೀ ಎಂ.ಆರ್. ಮಂಜುನಾಥ, ಉಪಾಧ್ಯಕ್ಷರಾದ ಶ್ರೀ ವೀರಯ್ಯ ಬಿ.ಆರ್.ಸಿ., ಶ್ರೀಮತಿ ಸುಮಂಗಳಮ್ಮ ಹಾಗೂ ಸಮನ್ವಯ ಅಧಿಕಾರಿಗಳಾದ ಶ್ರೀ ಮೈಲೇಶ್ ಬೇವೂರು ಭಾಗವಹಿಸಿರುತ್ತಾರೆ.

************

ದಿನಾಂಕ 03-07-2014 ರಂದು ಸಿರುಗುಪ್ಪ ತಾಲೂಕಿನ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಸ.ಮಾ.ಹಿ. ಪ್ರಾ ಶಾಲೆ 6ನೇ ವಾರ್ಡ್ ಸಿರುಗುಪ್ಪದಲ್ಲಿ ಏರ್ಪಡಿಸಲಾಯಿತು. ಈ ಸಮಾವೇಶವನ್ನು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಕೆ.ವಿ. ಶ್ರೀನಿವಾಸಮೂರ್ತಿ ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.

************

ದಿನಾಂಕ 10-07-2014 ರಂದು ಹೂವಿನ ಹಡಗಲಿ ತಾಲೂಕಿನ ಸ್ಕೌಟರ್, ಗೈಡರ್ ಸಮಾವೇಶ ಪ.ಪೂ. ಕಾಲೇಜಿನಲ್ಲಿ ಏರ್ಪಡಿಸಲಾಯಿತು. 22 ಸ್ಕೌಟರ್ಸ್ ಗೈಡರ್ಸ್ ಭಾಗವಹಿಸಿರುತ್ತಾರೆ.

*************

ದಿನಾಂಕ 11-07-2014 ರಂದು ಸಂಡೂರು ತಾಲೂಕಿನ ಸ್ಕೌಟರ್ಸ್ ಗೈಡರ್ಸ್ ಸಮಾವೇಶ ಎಸ್.ಇ.ಎಸ್. ಬಾಲಕಿಯರ ಸ.ಹಿ. ಪ್ರಾ. ಶಾಲೆ ಸಂಡೂರಿನಲ್ಲಿ ಏರ್ಪಡಿಸಲಾಯಿತು. 32 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಮೌನೇಶ್ ಅಧ್ಯಕ್ಷತೆ ವಹಿಸಿದ್ದರು.

## ದಾವಣಗೆರೆ

ದಿನಾಂಕ 09-07-2014 ರಂದು ಹರಿಹರ ನಗರದ ಬಾಬಾ ಸಾಹೇಬ್ ಅಂಬೇಡ್ಕರ್ ಶಾಲೆಯಲ್ಲಿ ಹರಿಹರ ಸ್ಥಳೀಯ ಸಂಸ್ಥೆಯ ವಾರ್ಷಿಕ ಸಾಮಾನ್ಯ ಸಭೆ ಮತ್ತು ಸಮಾವೇಶವನ್ನು ಆಯೋಜಿಸಲಾಗಿತ್ತು. ಸಭೆಯ ಅಧ್ಯಕ್ಷತೆಯನ್ನು ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಬಿ. ಜಯದೇವಪ್ಪನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಸಂಸ್ಥೆಯ ಆಯುಕ್ತರಾದ ಶ್ರೀ ಎ. ಶಿವಪ್ಪ, ಶ್ರೀಮತಿ ಶಶಿಕಲಾ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಹಾಲಪ್ಪ ಎಸ್.ಹೆಚ್., ಶ್ರೀಮತಿ ಡಿ.ಪಿ. ಗೀತಾ, ಶ್ರೀ ಟಿ.ಎಸ್. ಶಿವಣ್ಣ ಹಾಗೂ ಜಿಲ್ಲಾ ಪ್ರತಿನಿಧಿಯಾದ ಶ್ರೀ ಎಂ.ಎಸ್. ಮೋಹನ್ ಭಾಗವಹಿಸಿದ್ದರು.

## ದಕ್ಷಿಣ ಕನ್ನಡ

ಪಾವೂರು ಹರೇಕಳದ ಶ್ರೀ ರಾಮಕೃಷ್ಣ ಪ್ರೌಢಶಾಲೆಯ ಸೌಜನ್ಯ ಸ್ಕೌಟ್ ದಳ ಮತ್ತು ದೇರಳಕಟ್ಟೆಯ ವಿದ್ಯಾರತ್ನ ಆಂಗ್ಲ ಮಾಧ್ಯಮ ಶಾಲೆಯ ಬಾಲ ಗಂಗಾಧರ ತಿಲಕ್ ಸ್ಕೌಟ್ ದಳ ಕೊಣಾಜೆ ಸಮೀಪದ ಪರಂಡೆಯ ಗದ್ದೆಯಲ್ಲಿ ಆಯೋಜಿಸಿದ್ದ 'ಹಳೆ ಬೇರು ಹೊಸ ಚಿಗುರು' ಕಾರ್ಯಕ್ರಮದಲ್ಲಿ ಕೃಷಿ ಪದ್ಧತಿ ಬಗ್ಗೆ ಮಾಹಿತಿ ಪಡೆದರು.

ಗ್ರಾಮೀಣ ಪ್ರದೇಶದ ಕೃಷಿಯಲ್ಲಿ ಹಿಂದಿನ ಕಾಲದಲ್ಲಿ ಬಳಸುತ್ತಿದ್ದ ಪರಿಕರಗಳ ಬಗ್ಗೆ ಪ್ರದರ್ಶನ ಮತ್ತು ವಿವರಣೆಯನ್ನು ಕೃಷಿಕ ಶ್ರೀ ಧನಂಜಯ ಬಂಗೇರ ನೀಡಿದರೆ, ಸಾಂಪ್ರದಾಯಿಕ ಕೃಷಿ ಪದ್ಧತಿಯಲ್ಲಿ ಉಳುಮೆ, ಹಲಗೆ ಹಾಕುವ ವಿಚಾರವನ್ನು ಶ್ರೀ ಚಂದ್ರಹಾಸ್ ನಾಯಕ್ ತಿಳಿಸಿಕೊಟ್ಟರು.

ಆಧುನಿಕ ಕೃಷಿ ಪದ್ಧತಿಯಲ್ಲಿ ಬಳಸುವ ಯಂತ್ರಗಳಾದ ಟಿಲ್ಲರ್ ಪ್ರಾತ್ಯಕ್ಷಿತೆಯನ್ನು ಶ್ರೀ ಐವನ್ ಡಿ'ಸೋಜ ನಡೆಸಿಕೊಟ್ಟರೆ, ಕೃಷಿಯ ನಾಟಿ ಸಂದರ್ಭದಲ್ಲಿ ಮಹಿಳೆಯರು ಗದ್ದೆಗಳಲ್ಲಿ ಹೇಳುವ ಪಾಡ್ದನ, ತೆಂಗಿನ ಗರಿಗಳನ್ನು ಹೆಣೆಯುವ ಕುರಿತು ಮಾಹಿತಿ ಮತ್ತು ಪ್ರಾತ್ಯಕ್ಷಿತೆಯನ್ನು ಶ್ರೀಮತಿ ರತ್ನಾವತಿ ಶೇಟ್ಟಿಗಾರ್ ನಡೆಸಿಕೊಟ್ಟರು. ನೇಜಿ ನಾಟಿ ವಿಚಾರದಲ್ಲಿ ಪ್ರಾತ್ಯಕ್ಷಿತೆಯನ್ನು ಶ್ರೀ ಭೋಜ ಕುಕ್ಯಾನ್, ಭತ್ತದ ಪದ್ಧತಿಯ ಕುರಿತು ಶ್ರೀ ಶ್ರೀನಿವಾಸ್ ಪೂಂಜಾ ಮಾಹಿತಿ ನೀಡಿದರು.

ಶಾರದಾ ವಿದ್ಯಾಲಯದ ಸ್ಕೌಟ್ ಮತ್ತು ಗೈಡ್ ತಂಡದ ಸದಸ್ಯರು ಕಟೀಲು ದೇವಾಳದ ಸಮೀಪವಿರುವ ಅಜಾರು ಗ್ರಾಮದ ಕೃಷಿಕರಾದ ಶ್ರೀ ಶೇಖರ್ ಮತ್ತು ಶ್ರೀಮತಿ ಸುಮತಿ ಅವರ ಮನೆಯ ಗದ್ದೆಯಲ್ಲಿ ಬೇಸಾಯ ಮಾಡುವ ಕುರಿತು ಪ್ರಾಯೋಗಿಕ ಅನುಭವ ಪಡೆದುಕೊಂಡರು.

************

ದಿನಾಂಕ 16-07-2014 ರಂದು ಸರಕಾರಿ ಸಂಯುಕ್ತ ಪದವಿಪೂರ್ವ ಕಾಲೇಜು ಬೊಕ್ಕಪಟ್ಣಾ ಇಲ್ಲಿಯ ನೇತ್ರಾವತಿ ಗೈಡ್ ದಳ ಹಾಗೂ ನಂದನ ಇಕೋ ಕ್ಲಬ್ ಆಯೋಜಿಸಿದ ವನಮಹೋತ್ಸವ ಕಾರ್ಯಕ್ರಮದ ಉದ್ಘಾಟನೆಯನ್ನು ಮಂಗಳೂರಿನ ಶ್ರೇಕಾ ಬಿಲ್ಡರ್ಸ್‌ನ ಮಾಲಿಕರಾದ ಶ್ರೀ ಕಮಲಾಕ್ಷ ಬಂಗೇರ ಇವರು ಗಿಡನೆಡುವುದರ ಮೂಲಕ ನೆರವೇರಿಸಿದರು. ಕಾರ್ಯಕ್ರಮದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಶ್ಯಾಮ್ ಮ್ಯೊಲಿ, ಹಿರಿಯ ಶಿಕ್ಷಕರಾದ ಶ್ರೀಮತಿ ಅನ್ನಪೂರ್ಣ ಬುಚ್ಚನ್, ಅಧ್ಯಾಪಕರು, ವಿದ್ಯಾರ್ಥಿಗಳು ಭಾಗವಹಿಸಿದರು. ಗೈಡ್ ಶಿಕ್ಷಕಿ ಶ್ರೀಮತಿ ಜಯಶ್ರೀ ಸ್ವಾಗತಿಸಿ ಎಲ್ಲರನ್ನೂ ವಂದಿಸಿದರು.

*************

ದಿನಾಂಕ 04-08-2014 ರಿಂದ 07-08-2014 ರ ವರೆಗೆ ಶಿಕ್ಷಣ ಹಾಗೂ ತರಬೇತಿ ಸಂಸ್ಥೆ, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ಮಂಗಳೂರು ಉತ್ತರ ಇವರ ಆಶ್ರಯದಲ್ಲಿ ಎಂ.ಜಿ.ಸಿ. ವಿದ್ಯಾ ಸಂಸ್ಥೆ ಬೊಂದೆಲ್‌ನಲ್ಲಿ ನಡೆದ ಜಿಲ್ಲಾ ಮಟ್ಟದ ಪ್ರಾಥಮಿಕ ಹಾಗೂ ಪ್ರೌಢಶಾಲಾ ಮಕ್ಕಳ ಇನ್ಸ್‌ಪೈರ್ ಅವಾರ್ಡ್ ಕಾರ್ಯಕ್ರಮದಲ್ಲಿ ವಿವೇಕಾನಂದ ಕಾಲೇಜು, ಪುತ್ತೂರು ಹಾಗೂ ಆಳ್ವಾಸ್ ಪದವಿ ಪೂರ್ವ ಕಾಲೇಜು ಮೂಡಬಿದ್ರೆ ಇಲ್ಲಿಯ 50 ರೋವರ್ ಸ್ವಯಂಸೇವಕರಾಗಿ ಕರ್ತವ್ಯ ನಿರ್ವಹಿಸಿದರು.

## ಮೈಸೂರು

ದಿನಾಂಕ 06-08-2014 ರಂದು ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ ಮತ್ತು ಗೈಡ್ ಭವನದಲ್ಲಿ ಮೈಸೂರು ಜಿಲ್ಲೆಯ ಸರ್ಕಾರಿ, ಅನುದಾನಿತ ಹಾಗೂ ಅನುದಾನ ರಹಿತ ಪ್ರೌಢಶಾಲೆ ಮತ್ತು ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯೋಪಾಧ್ಯಾಯರುಗಳಿಗೆ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರ ನಡೆಯಿತು.

ಈ ಶಿಬಿರದಲ್ಲಿ 245 ಮುಖ್ಯೋಪಾಧ್ಯಾಯರುಗಳು ಭಾಗವಹಿಸಿದ್ದರು. ಬೆಳಗ್ಗೆ ನಡೆದ ಉದ್ಘಾಟನಾ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಹೆಚ್.ಆರ್. ಬಸಪ್ಪ ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ಮೈಸೂರು ಜಿಲ್ಲೆ ಮತ್ತು ಶ್ರೀ ಸಿ. ಮರಿಯಪ್ಪ, ಜಿಲ್ಲಾ ಅಧೀಕ್ಷಕರು, ದೈಹಿಕ ಶಿಕ್ಷಣ, ಸಾ.ಶಿ.ಇ. ಮೈಸೂರು ಜಿಲ್ಲೆ

ಆಗಮಿಸಿದ್ದರು. ಶ್ರೀ ಪಿ. ವಿಶ್ವನಾಥ್ ಜಿಲ್ಲಾ ಮುಖ್ಯ ಆಯುಕ್ತರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಮೈಸೂರಿನಲ್ಲಿ ಈ ಚಳುವಳಿ ಹೆಚ್ಚಿನ ಸಂಖ್ಯೆಯಲ್ಲಿ ಬೆಳೆಯುವಲ್ಲಿ ತಮ್ಮ ಸಹಕಾರ ಅಮೂಲ್ಯವಾದದ್ದು ಎಂದು ತಿಳಿಸಿದರು.

ಪ್ರಾರಂಭದಲ್ಲಿ ಡಾ॥ ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿಗಳು ಸ್ವಾಗತ ಕೋರಿದರು. ಶ್ರೀ ಅಬ್ದುಲ್ ಜಮೀಲ್ ಜಿಲ್ಲಾ ಆಯುಕ್ತರು (ಸ್ಕೌಟ್) ರವರು ವಂದನಾರ್ಪಣೆ ಮಾಡಿದರು. ಶ್ರೀ ಚೆಲ್ಲಯ್ಯ, ಜಂಟಿ ರಾಜ್ಯ ಕಾರ್ಯದರ್ಶಿಗಳು (ಸ್ಕೌಟ್) ರಾಜ್ಯ ಸಂಸ್ಥೆ ಸಂಪನ್ಮೂಲ ವ್ಯಕ್ತಿಗಳಾಗಿ ಆಗಮಿಸಿದ್ದರು.

ಸಂಜೆ ನಡೆದ ಮುಕ್ತಾಯ ಸಮಾರಂಭಕ್ಕೆ ಶ್ರೀಮತಿ ರಾಜಶ್ರೀ, ಜಿಲ್ಲಾ ಸ್ಥಾನಿಕ ಆಯುಕ್ತರು (ಗೈ) ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಡಾ॥ ಪಿ.ವಿ. ರತ್ನ ಅರಸ್ ಎ.ಎಸ್.ಸಿ.(ಗೈ) ರವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ಡಾ॥ ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿಗಳು ಸ್ವಾಗತ ಕೋರಿದರು. ಶ್ರೀ ಅಜಯ್ ಕುಮಾರ್ ಜೈನ್. ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌ) ವಂದನಾರ್ಪಣೆ ಮಾಡಿದರು.

## ಉಡುಪಿ

ದಿನಾಂಕ 09-08-2014 ರಂದು ಡಾ. ವಿ.ಎಸ್. ಆಚಾರ್ಯ, ಜಿಲ್ಲಾ ತರಬೇತಿ ಕೇಂದ್ರ, ಪ್ರಗತಿ ನಗರ, ಅಲೆವೂರು ಇಲ್ಲಿ ಜಿಲ್ಲಾ ಸಂಸ್ಥೆ, ಉಡುಪಿ ಹಾಗೂ ಉಡುಪಿ ರೋಟರಿಯವರ ಸಹಯೋಗದಲ್ಲಿ, ವನಮಹೋತ್ಸವವನ್ನು ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ಜ್ಯೋತಿ ಜೆ.ಪೈ ಗಿಡ ನೆಡುವುದರ ಮೂಲಕ ಕಾರ್ಯಕ್ರಮ ಉದ್ಘಾಟಿಸಿ, ವನಮಹೋತ್ಸವದ ಮಹತ್ವ ತಿಳಿಸಿದರು. ಮುಖ್ಯ ಅತಿಥಿಗಳಾಗಿದ್ದ ಶ್ರೀ ಎಡ್ವಿನ್ ಆಳ್ವ ಜಿಲ್ಲಾ ಆಯುಕ್ತರು,(ಸ್ಕೌ) ಸಂದರ್ಭೋಚಿತ ಮಾತುಗಳನ್ನಾಡಿದರು.

ಸಹ ಜಿಲ್ಲಾ ಆಯುಕ್ತರಾದ ಶ್ರೀ ಸುಬ್ರಹ್ಮಣ್ಯ ಶಾಸ್ತ್ರಿ, ಶ್ರೀ ಐ.ಕೆ. ಜಯಚಂದ್ರ, ಜೊತೆ ಕಾರ್ಯದರ್ಶಿ ಶ್ರೀಮತಿ ಜಯಮಾಲಿನಿ, ಕಾರ್ಯದರ್ಶಿ ಶ್ರೀ ಶೇಖರ ಪೂಜಾರಿ ಉಪಸ್ಥಿತರಿದ್ದರು. ಸ್ಥಾನೀಯ ಆಯುಕ್ತ ಶ್ರೀ ಬಿ. ಆನಂದ ಅಡಿಗ ಸ್ವಾಗತಿಸಿ ಜಿಲ್ಲಾ ಸಂಘಟಕ ಶ್ರೀ ನಿತಿನ್ ಅಮಿನ್ ಧನ್ಯವಾದ ನೀಡಿದರು ರೋವರ್ ಸ್ಕೌಟ್ ಲೀಡರ್ ಶ್ರೀ ಸಚೇಂದ್ರ ಕಾರ್ಯಕ್ರಮ ನಿರ್ವಹಿಸಿದರು. ಮಾಧವ ಪೈ ಮೆಮೋರಿಯಲ್ ಕಾಲೇಜಿನ 50 ರೋವರ್, ರೇಂಜರ್‌ಗಳು ಗಿಡ ನೆಡುವ ಕಾರ್ಯದಲ್ಲಿ ಸಹಕರಿಸಿದ್ದರು.

**************

"ವ್ಯಕ್ತಿತ್ವ ವಿಕಸನ ಸ್ಕೌಟಿಂಗ್‌ನಿಂದ ಸಾಧ್ಯ, ತರಬೇತಿ ಪಡೆದರೆ ಸಾಲದು, ಪರಿಣಾಮಕಾರಿಯದ ತರಬೇತಿ ನೀಡಿ ವೃತ್ತಿ ಜೀವನ ಸಾರ್ಥಕಗೊಳಿಸಿರಿ" ಎಂದು ಶ್ರೀ ವಿಶ್ವೇಶ್ವರ ಅಡಿಗ, ಪ್ರಾಂಶುಪಾಲರು ಹೇಳಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬೈಂದೂರು ಆಶ್ರಯದಲ್ಲಿ ನಡೆದ ಸ್ಕೌಟರ್-ಗೈಡರ್ ಪುನಶ್ಚೇತನ ಶಿಬಿರವನ್ನು ಉದ್ಘಾಟಿಸುತ್ತ ಹೀಗೆ ನುಡಿದರು. ಸಭೆಯ ಅಧ್ಯಕ್ಷತೆ ವಹಿಸಿದ್ದ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಮಾತನಾಡುತ್ತಾ ಸೇವಾ ಮನೋಭಾವನೆ ಇರಲಿ. ಮಕ್ಕಳ ಪ್ರತಿಭೆಗೆ ಅವಕಾಶ ನೀಡಿ ಎಂದರು. ಇನ್ನೋರ್ವ ಮುಖ್ಯ ಅತಿಥಿ ಪ್ರಭಾರ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ನಾಗೇಶ ನಾಯ್ಕ್ ಮಾತನಾಡಿ, ಉತ್ತಮ ನಾಗರಿಕ ಸಮಾಜ ಸ್ಕೌಟಿಂಗ್‌ನಿಂದ ನಿರ್ಮಾಣವಾಗುತ್ತದೆ. ಶಿಸ್ತು, ದೇಶಪ್ರೇಮ, ಸ್ಕೌಟ್-ಗೈಡ್ ಚಟುವಟಿಕೆಯಿರುವ ಶಾಲೆಗಳಲ್ಲಿ ಕಾಣಬಹುದು ಎಂದರು. ಸಂಪನ್ಮೂಲ ವ್ಯಕ್ತಿ

ಶ್ರೀ ಆನಂದ ಅಡಿಗ ಪ್ರಾಸ್ತಾವಿಕ ನುಡಿಗಳನ್ನಾಡಿದರು. ತರಬೇತಿ ಆಯುಕ್ತ ಶ್ರೀ ಕೊಗ್ಗ ಗಾಣಿಗರು ಸ್ವಾಗತಿಸಿ, ಕಾರ್ಯದರ್ಶಿ ಶ್ರೀ ಎಂ.ಜಿ. ಹೆಗಡೆ ಧನ್ಯವಾದ ನೀಡಿದ್ದರು. ಶಿಬಿರದಲ್ಲಿ 36 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

## ಶಿರಸಿ

ದಿನಾಂಕ 02-08-2014 ರಂದು ಶಿರಸಿ ಸ್ಥಳೀಯ ಸಂಸ್ಥೆಯ ವಾರ್ಷಿಕ ಮಹಾಸಭೆ ಮತ್ತು ನೂತನ ಪದಾಧಿಕಾರಿಗಳ ಆಯ್ಕೆ ಸರಕಾರಿ ಮಾದರಿ ಉರ್ದು ಹಿರಿಯ ಪ್ರಾಥಮಿಕ ಶಾಲೆ ನೆಹರು ನಗರ, ಶಿರಸಿಯಲ್ಲಿ ಜರುಗಿತು.

***********

ಸ್ವಾತಂತ್ರ್ಯೋತ್ಸವದ ಅಂಗವಾಗಿ ಹಳಿಯಾಳದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ನಗರ ಮೆರವಣಿಗೆಯಲ್ಲಿ ಪಾಲ್ಗೊಂಡರೆ, ಮುಂಡಗೋಡಿನಲ್ಲಿ ರೋವರ್‌ಗಳು ಪಥಸಂಚಲನದಲ್ಲಿ ಭಾಗವಹಿಸಿದರು. ಶಿರಸಿಯ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ 13 ಸ್ಕೌಟ್ಸ್ ಮತ್ತು ಗೈಡ್ಸ್ ದಳಗಳು, ಸ್ಕೌಟರ್-ಗೈಡರ್ ಮಾರ್ಗದರ್ಶನದಲ್ಲಿ ಭಾಗವಹಿಸಿದ್ದರು.

***********

ದಿನಾಂಕ 19-08-204 ರಂದು ಸಿದ್ಧಾಪುರ ಸ್ಥಳೀಯ ಸಂಸ್ಥೆಯ ವಾರ್ಷಿಕ ಮಹಾಸಭೆ, ಕಾರ್ಯಾಗಾರ ಮತ್ತು ನೂತನ ಪದಾಧಿಕಾರಿಗಳ ಆಯ್ಕೆ ಪ್ರಕ್ರಿಯೆಯು ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಬಾಲಿಕೊಪ್ಪ, ಸಿದ್ಧಾಪುರದಲ್ಲಿ ನಡೆಯಿತು. ಕಾರ್ಯಾಗಾರವನ್ನು ತಾಲೂಕು ಪಂಚಾಯತ ಕಾರ್ಯನಿರ್ವಹಣಾಧಿಕಾರಿ ಶ್ರೀ ಶ್ರೀಧರ ಎಸ್. ಭಟ್, ಉದ್ಘಾಟಿಸಿದರು. ಸ್ಕೌಟಿಂಗ್‌ನ ಧ್ಯೇಯೋದ್ದೇಶಗಳನ್ನು ವಿವರಿಸಿ, ಇತ್ತೀಚೆಗೆ ಅಪಘಾತದಲ್ಲಿ ಆಕಸ್ಮಿಕ ಮರಣ ಹೊಂದಿದ ತಾಲೂಕಿನ ದೈಹಿಕ, ಶಿಕ್ಷಣ ಪರಿವೀಕ್ಷಣಾಧಿಕಾರಿಗಳಾದ ಶ್ರೀ ಎಸ್.ಜಿ. ಹೆಗಡೆಯವರ ಸೇವೆಯನ್ನು ಮತ್ತು ಸ್ಕೌಟಿಂಗ್ ಕುರಿತ ಅವರ ಕಾಳಜಿಯನ್ನು ನೆನೆದು ಶ್ರದ್ಧಾಂಜಲಿ. ಸಲ್ಲಿಸಲಾಯಿತು. ವೇದಿಕೆಯಲ್ಲಿ ಶ್ರೀ ಎಂ.ವಿ. ನಾಯ್ಕ್ ಪ್ರಭಾರಿ ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿಗಳು, ಶ್ರೀ ಜಿ.ಜಿ. ಹೆಗಡೆ ಬಾಳಗೋಡ, ಉಪಾಧ್ಯಕ್ಷರು, ಸ್ಥಳೀಯ ಸಂಸ್ಥೆ, ಶ್ರೀ ಎನ್.ಎಂ. ನಾಯ್ಕ್, ಶ್ರೀ ಎಂ.ಕೆ. ನಾಯ್ಕ, ತಾಲ್ಲೂಕಿನ ಪ್ರೌಢ ಮತ್ತು ಪ್ರಾಥಮಿಕ ಶಾಲಾ ಶಿಕ್ಷಕರ ಸಂಘಡ ಅಧ್ಯಕ್ಷರುಗಳು, ಶ್ರೀ ಸುರೇಶ ಪಟಗಾರ ಜಿಲ್ಲಾ ಕಾರ್ಯದರ್ಶಿಗಳು ಉಪಸ್ಥಿತರಿದ್ದರು. ಶ್ರೀ ಜಿ.ಐ. ನಾಯ್ಕ ಅಕ್ಷರ ದಾಸೋಹ ನಿರ್ದೇಶಕರು ಅಧ್ಯಕ್ಷತೆ ವಹಿಸಿದ್ದರು. ಸ್ಕೌಟರ್-ಗೈಡರ್‌ಗಳಿಗೆ ಕಾರ್ಯಾಗಾರವನ್ನು ಜಿಲ್ಲಾ ಸಂಘಟಕರಾದ ಶ್ರೀ ಎಸ್.ಎನ್. ಗೋಪಾಲಕೃಷ್ಣ ನಡೆಸಿಕೊಟ್ಟರು. ಕಾರ್ಯದರ್ಶಿ ಶ್ರೀ ಜಿ.ಜಿ. ಹೆಗಡೆ ಸ್ವಾಗತಿಸಿದರೆ ಶ್ರೀ ಎಸ್.ಎನ್. ಪ್ರಭು ವರದಿ ವಾಚಿಸಿದರು. ಶ್ರೀ ಮಹೇಶ ವಿ. ಶೇಟ್ ವಂದಿಸಿದರೆ ಕಾರ್ಯಕ್ರಮವನ್ನು ಶ್ರೀ ವಿ.ಟಿ. ನಾಯ್ಕ್ ನಿರೂಪಿಸಿದ್ದರು.

## ಬಾಗಲಕೋಟೆ

ದಿನಾಂಕ 25-07-2014 ರಂದು ಬಾಗಲಕೋಟೆ ತಾಲ್ಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸ್ಕೌಟ್-ಗೈಡ್ಸ್ ಕೇಂದ್ರ ಕಛೇರಿಯಲ್ಲಿ ಜರುಗಿಸಲಾಯಿತು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಎನ್.ಬಿ.

ಗೋರವರ ಕ್ಷೇತ್ರ ಶಿಕ್ಷಣಾಧಿಕಾರಿ, ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಕೆ.ಜಿ. ಮುದಳಖೋಡ, ಉಪಪ್ರಾಚಾರ್ಯರು ಭಾಗವಹಿಸಿದ್ದರು ಹಾಗೂ ಜಿಲ್ಲಾ ಕಾರ್ಯದರ್ಶಿಗಳು ತಾಲೂಕು ಪದಾಧಿಕಾರಿಗಳು ಹಾಜರಿದ್ದರು. ಪ್ರಾಸ್ತಾವಿಕವಾಗಿ ಶ್ರೀ ಸಿ.ಎ. ಸಾವಳಗಿ ಮಾತನಾಡಿದರು.

**********

ದಿನಾಂಕ 11-08-2014 ರಂದು ಮುಧೋಳ ತಾಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ರನ್ನ ಮಾದರಿಯ ಪ್ರಾಥಮಿಕ ಶಾಲೆ ಮುಧೋಳದಲ್ಲಿ ಜರುಗಿಸಲಾಯಿತು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀಮತಿ ಆರ್.ವಿ. ಜೋಶಿರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ತಾಲೂಕು ಪದಾಧಿಕಾರಿಗಳು, ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು. ಸ್ಕೌಟ್ ಚಳವಳಿಯ ಕುರಿತು ಶ್ರೀ ಎಸ್.ಆರ್. ಪಾಟೀಲ ಸ್ಕೌಟ್ ಆಯುಕ್ತರು ಮಾಹಿತಿ ನೀಡಿದ್ದರು. ಕಾರ್ಯಕ್ರಮವನ್ನು ಶ್ರೀ ಹೆಚ್.ಬಿ. ಭಜಂತ್ರಿ ಸ್ಕೌಟ್ ಮಾಸ್ಟರ್ ನಿರ್ವಹಿಸಿದರು.

*********

ದಿನಾಂಕ 15-08-2014 ರಂದು ಸ್ವಾತಂತ್ರ್ಯೋತ್ಸವದ ಧ್ವಜಾರೋಹಣ ಕಾರ್ಯಕ್ರಮವನ್ನು ಜಿಲ್ಲಾ ಕೇಂದ್ರ ಕಛೇರಿಯಲ್ಲಿ ಮಾನ್ಯಶ್ರೀ ಜಿ.ಎಸ್. ಪಾಟೀಲ ಉಪಾಧ್ಯಕ್ಷರು ನಿರ್ವಹಿಸಿದರು. ವಿವಿಧ ಶಾಲೆಗಳಿಂದ ಸ್ಕೌಟ್-ಗೈಡ್, ರೋವರ್ಸ್-ರೇಂಜರ್ಸ್‌ಗಳು, ಶಿಕ್ಷಕರು ಹಾಜರಿದ್ದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ ಶ್ರೀ ಜಿ.ಬಿ. ಇದ್ದಲಗಿ ಹಾಗೂ ಪದಾಧಿಕಾರಿಗಳು ಸಹ ಹಾಜರಿದ್ದರು. ಜಿಲ್ಲಾ ಕ್ರೀಡಾಂಗಣ ನವನಗರದಲ್ಲಿ ನಡೆದ ಧ್ವಜಾರೋಹಣ ಹಾಗೂ ಪಥಸಂಚಲನೆಯಲ್ಲಿ ಸ್ಕೌಟ್-ಗೈಡ್ಸ್, ರೋವರ್ಸ್-ರೇಂಜರ್ಸ್ ನಾಲ್ಕು ತಂಡಗಳು ಭಾಗವಹಿಸಿದ್ದವು.

ಶ್ರೀ ಬಸವೇಶ್ವರ ಪ್ರಾಥಮಿಕ ಶಾಲೆ ವಿದ್ಯಾಗೇರಿ ಗೈಡ್ಸ್ ತಂಡವು ಪಥಸಂಚಲನದಲ್ಲಿ "ತೃತೀಯ ಸ್ಥಾನ" ಪಡೆದರು. ಜಿಲ್ಲಾ ಉಸ್ತುವಾರಿ ಸಚಿವರು ಮಾನ್ಯಶ್ರೀ ಎಸ್.ಆರ್. ಪಾಟೀಲ ಇವರಿಂದ ನೆನಪಿನ ಕಾಣಿಕೆ ಪ್ರಮಾಣಪತ್ರವನ್ನು ಸ್ವೀಕರಿಸಿದರು.

## ಚಿತ್ರದುರ್ಗ

ದಿನಾಂಕ 25-07-2014 ರಂದು ಶ್ರೀ ಅಲ್ಲಮ ಪ್ರಭು ಸಂಶೋಧನಾ ಕೇಂದ್ರ ಶ್ರೀ ಮುರುಘಾಮಠ ಚಿತ್ರದುರ್ಗ ಇಲ್ಲಿ ಶ್ರೀ ಎಸ್.ಜೆ.ಎಂ. ವಿದ್ಯಾಸಂಸ್ಥೆ ಮತ್ತು ಇತರ ವಿದ್ಯಾ ಸಂಸ್ಥೆಗಳ ಶಿಕ್ಷಕ-ಶಿಕ್ಷಕಿಯರಿಗೆ ಸ್ಕೌಟಿಂಗ್-ಗೈಡಿಂಗ್ ಪರಿಚಯಾತ್ಮಕ ಶಿಬಿರ ನಡೆಯಿತು. ಶ್ರೀ ರೇವಣ್ಣ ಆಡಳಿತಾಧಿಕಾರಿ, ಎಸ್.ಜೆ.ಎಂ. ವಿದ್ಯಾಪೀಠ ಇವರು ಶಿಬಿರ ಉದ್ಘಾಟಿಸಿ ಇಂದಿನ ಸಮಾಜದಲ್ಲಿ ಸ್ಕೌಟ್ಸ್/ಗೈಡ್ಸ್ ಶಿಕ್ಷಣದ ಮಹತ್ವದ ಕುರಿತು ಮಾತನಾಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ದೊರೆಸ್ವಾಮಿ, ಪ್ರಧಾನ ಕಾರ್ಯಕರ್ತರು ಎಸ್.ಜೆ.ಎಮ್, ವಿದ್ಯಾಪೀಠ ಶ್ರೀ ಮುರುಘಾಮಠ ಆಗಮಿಸಿದ್ದರು. ಶ್ರೀ ನಾಗೇಶ್ ಆರ್. ಶಿವಪುರ್ ಪರಿಚಯಾತ್ಮಕ ಶಿಬಿರದ ನಾಯಕರಾಗಿ ಕಾರ್ಯನಿರ್ವಹಿಸಿದರು.

*************

ದಿನಾಂಕ 26-07-2014 ರಿಂದ 01-08-2014 ರ ವರೆಗೆ ಶ್ರೀ ಅಲ್ಲಮಪ್ರಭು ಸಂಶೋಧನಾ ಕೇಂದ್ರ ಶ್ರೀ ಮುರುಘಾಮಠ ಚಿತ್ರದುರ್ಗ ಇಲ್ಲಿ ಶ್ರೀ ಎಸ್.ಜೆ.ಎಂ. ವಿದ್ಯಾ ಸಂಸ್ಥೆಗಳ ಮತ್ತು ಇತರ ವಿದ್ಯಾ ಸಂಸ್ಥೆಗಳ ಶಿಕ್ಷಕ-ಶಿಕ್ಷಕಿಯರಿಗೆ ಸ್ಕೌಟ್ ಮಾಸ್ಟರ್ ಹಾಗೂ ಗೈಡ್ ಕ್ಯಾಪ್ಟನ್ ಮೂಲ ತರಬೇತಿಯನ್ನು ನಡೆಸಲಾಯಿತು. ಸ್ಕೌಟ್ ಮಾಸ್ಟರ್ ತರಬೇತಿಗೆ 22 ಶಿಕ್ಷಕರು, ಗೈಡ್ ಕ್ಯಾಪ್ಟನ್ ತರಬೇತಿಗೆ 13 ಶಿಕ್ಷಕಿಯರು, ನಾಯಕ ಶ್ರೀ ನಾಗೇಶ ಆರ್. ಶಿವಪುರ, ನಾಯಕಿ ಶ್ರೀಮತಿ ಸುಷ್ಮಾ ಎಸ್. ಗುಡ್ಡದ್ ಇವರುಗಳ ನಾಯಕತ್ವದಲ್ಲಿ ತರಬೇತಿಯನ್ನು ಪಡೆದರು.

ತರಬೇತಿ ಶಿಬಿರದ ಉದ್ಘಾಟನಾ ಸಮಾರಂಭದ ದಿವ್ಯ ಸಾನ್ನಿಧ್ಯವನ್ನು ವಹಿಸಿದ್ದ ಪರಮ ಪೂಜ್ಯ ಶ್ರೀಶ್ರೀಶ್ರೀ ಡಾ. ಶಿವಮೂರ್ತಿ ಮುರುಘಾಶರಣರು, ಶ್ರೀ ಮುರುಘಾಮಠ ಚಿತ್ರದುರ್ಗ ಇವರು ಸಸಿಗೆ ನೀರು ಹಾಕುವುದರೊಂದಿಗೆ ಕಾರ್ಯಕ್ರಮವನ್ನು ಉದ್ಘಾಟಿಸಿ ಆಶೀರ್ವಚನ ನೀಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಪಿ.ಎಲ್. ಸುರೇಶರಾಜು ಜಿಲ್ಲಾ ಆಯುಕ್ತರು (ಸ್ಕೌಟ್ಸ್), ವಹಿಸಿದ್ದರು. ಶ್ರೀ ಮಲ್ಲಿಕಾರ್ಜುನಪ್ಪ ಆಡಳಿತಾಧಿಕಾರಿಗಳು ಶ್ರೀ ಎಸ್.ಜೆ.ಎಮ್. ವಿದ್ಯಾಪೀಠ, ಶ್ರೀ ಮುರುಘಾಮಠ ಚಿತ್ರದುರ್ಗ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಮತಿ ಸುಜಯಾಪ್ರಕಾಶ ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಶ್ರೀಮತಿ ಹೇಮಂತಿನಿ ಪ್ರಕಾಶ ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀಮತಿ ರೀನಾ ವೀರಭದ್ರಪ್ಪ ಸಹ ಕಾರ್ಯದರ್ಶಿ ಶ್ರೀ ರೇವಣ್ಣ, ಶ್ರೀ ದೊರೆಸ್ವಾಮಿ ಮುಂತಾದ ಗಣ್ಯಮಾನ್ಯರು ಉದ್ಘಾಟನಾ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ದಿನಾಂಕ 01-08-2014 ರಂದು ಸಮಾರೋಪ ಸಮಾರಂಭ ಜರುಗಿತು. ಶ್ರೀಮತಿ ಸುಜಯ ಪ್ರಕಾಶ ರಾಜ್ಯ ಸ್ಥಾನಿಕ ಆಯುಕ್ತರು (ಗೈಡ್ಸ್) ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಮಾರೋಪ ಸಮಾರಂಭಕ್ಕೆ ಶ್ರೀಮತಿ ಮಂಜುಶ್ರೀ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಜಿಲ್ಲಾ ಪಂಚಾಯತ್ ಚಿತ್ರದುರ್ಗ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಧ್ಯೇಯೋದ್ದೇಶಗಳ ಕುರಿತು ಮಾತನಾಡಿದರು. ಶ್ರೀ ಮೊಹಮ್ಮದ್ ವಾಸಿಲ್ ಜಿಲ್ಲಾ ಸಂಯೋಜಕರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಿತ್ರದುರ್ಗ ಇವರು ಮುಖ್ಯ ಅತಿಥಿಗಳಾಗಿ ಉಪಸ್ಥಿತರಿದ್ದು ಸಂಸ್ಥೆಯು ಹಮ್ಮಿಕೊಂಡಿರುವ ಪ್ರಸಕ್ತ ಕಾರ್ಯಕ್ರಮಗಳ ಬಗ್ಗೆ ಮಾತನಾಡಿದರು. ಶ್ರೀ ಮೋಹನ್ ನಾಗರಾಜ್ ಮಾಜಿ ತಾಲ್ಲೂಕು ಪಂಚಾಯತ್ ಅಧ್ಯಕ್ಷರು, ಹೊಳಲ್ಕೆರೆ, ಶ್ರೀ ರೇವಣ್ಣಪ್ಪ ಆಡಳಿತಾಧಿಕಾರಿಗಳು ಎಸ್.ಜೆ.ಎಂ. ವಿದ್ಯಾಪೀಠ, ಚಿತ್ರದುರ್ಗ, ಶ್ರಿ ಪಿ.ಎಲ್. ಸುರೇಶರಾಜು ಜಿಲ್ಲಾ ಆಯುಕ್ತರು ಸ್ಕೌಟ್ಸ್, ಶ್ರೀಮತಿ ಹೇಮಂತಿನಿ ಪ್ರಕಾಶ್ ಜಿಲ್ಲಾ ಗೈಡ್ಸ್ ಆಯುಕ್ತರು, ಶ್ರೀಮತಿ ಅಂಬಿಕಾ ಹರೀಶ ಜಿಲ್ಲಾ ಸ್ಥಾನಿಕ ಆಯುಕ್ತರು (ಗೈಡ್ಸ್) ಶ್ರೀ ಮೊಹಮ್ಮದ್ ಮೊಹೀನುದ್ದೀನ್ ಜಿಲ್ಲಾ ಸ್ಥಾನಿಕ ಆಯುಕ್ತರು ಸ್ಕೌಟ್ಸ್, ಶ್ರೀಮತಿ ರೀನಾ ವೀರಭದ್ರಪ್ಪ ಸಹ ಕಾರ್ಯದರ್ಶಿ ಉಪಸ್ಥಿತರಿದ್ದರು.

ದಿನಾಂಕ 31-07-2014 ರಂದು ಕರ್ನಾಟಕ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳಿಗೆ ಮಾರ್ಗದರ್ಶನ ನೀಡಿದರು. ಶ್ರೀ ಉಜ್ಜಿನಪ್ಪ ಪತ್ರಕರ್ತರು ಚಿತ್ರದುರ್ಗ ಇವರೊಂದಿಗೆ ಉಪಸ್ಥಿತರಿದ್ದರು.

*********

ದಿನಾಂಕ 15-08-2014 ರಂದು ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲಾಯಿತು.

ಶ್ರೀ ಸುರೇಶ್‌ರಾಜ್ ಜಿಲ್ಲಾ ಸ್ಕೌಟ್ಸ್ ಆಯುಕ್ತರು ಚಿತ್ರದುರ್ಗ ಇವರು ಸ್ವಾತಂತ್ರ್ಯ ದಿನಾಚರಣೆಯ ಕುರಿತು ಮಾತನಾಡಿದರು. ಶ್ರೀಮತಿ ಸಿ.ಪಿ. ಸುಶೀಲ ಜಿಲ್ಲಾ ಗೈಡ್ಸ್ ತರಬೇತಿ ಆಯುಕ್ತರು, ಶ್ರೀ ರಾಜಶೇಖರ್ ಹೆಚ್.ಎಮ್. ಸ್ಕೌಟ್ ತರಬೇತುದಾರರು, ಶ್ರೀಮತಿ ಪದ್ಮಾವತಿ, ಶ್ರೀ ರಾಜಣ್ಣ ಮುಂತಾದ ಗಣ್ಯಮಾನ್ಯರು ಉಪಸ್ಥಿತರಿದ್ದರು. ಜಿಲ್ಲಾಡಳಿತ

ವತಿಯಿಂದ ಸರಕಾರಿ ವಿಜ್ಞಾನ ಮಹಾವಿದ್ಯಾಲಯ ಕ್ರೀಡಾಂಗಣದಲ್ಲಿ ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಏರ್ಪಡಿಸಿದ ಪಥ ಸಂಚಲನದಲ್ಲಿ ಚಿತ್ರದುರ್ಗ ನಗರದ ಸೇಂಟ್ ಜೋಸೆಫ್ ಶಾಲೆಯ ಗೈಡ್ಸ್ ಬಾಲಕಿಯರ ತಂಡ ಹಾಗೂ ಎಸ್.ಜೆ.ಎಂ. ಪ್ರೌಢಶಾಲೆಯ ಬಾಲಕಿಯರ ತಂಡ ಹಾಗೂ ಸ್ಕೌಟ್ ಬಾಲಕರ ತಂಡ ಮತ್ತು ವಿದ್ಯಾವಿಕಾಸ ಹಿ. ಪ್ರಾ. ಶಾಲೆಗಳ ಗೈಡ್ಸ್ ಬಾಲಕಿಯರ ತಂಡ ಭಾಗವಹಿಸಿದ್ದವು.

*************

ಹೊಸದುರ್ಗ ಸ್ಥಳೀಯ ಸಂಸ್ಥೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಹೊಸದುರ್ಗ ಇವರ ಸಂಯುಕ್ತಾಶ್ರಯ ದಲ್ಲಿ ಹಿರಿಯ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರಿಗೆ ಈ ಕೆಳಗಿನ ದಿನಾಂಕ ಮತ್ತು ಸ್ಥಳಗಳಲ್ಲಿ ಹೋಬಳಿ ಮಟ್ಟದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಮಾಹಿತಿ ಶಿಬಿರವನ್ನು ನಡೆಸಲಾಯಿತು.

| ಕ್ರ. ಸಂ. | ದಿನಾಂಕ | ಹೋಬಳಿ/ಸ್ಥಳ | ಭಾಗವಹಿಸಿದವರ ಸಂಖ್ಯೆ |
|---|---|---|---|
| 1) | 22-07-2014 | ಎ-ಬಿ ಸ.ಹಿ.ಪ್ರಾ.ಶಾಲೆ, ಕಸಬಾ | 40 |
| 2) | 22-07-2014 | ಸ.ಹಿ.ಪ್ರಾ.ಶಾಲೆ, ಮಾಡದಕೆರೆ | 25 |
| 3) | 23-07-2014 | ಸ.ಹಿ.ಪ್ರಾ.ಶಾಲೆ, ಶ್ರೀರಾಂಪುರ | 40 |
| 4) | 23-07-2014 | ಶ್ರೀಬಸವೇಶ್ವರ ಪ್ರೌಢಶಾಲೆ, ಮತ್ತೋಡು | 30 |

ಮಾಹಿತಿ ಶಿಬಿರದ ಸಿಬ್ಬಂದಿಯಾಗಿ ಜಿಲ್ಲೆಯಿಂದ ಶ್ರೀ ಹೆಚ್.ಎಮ್. ರಾಜಶೇಖರ್ ಎ.ಎಲ್.ಟಿ.(ಸ್ಕೌಟ್) ಶ್ರೀ ಎ.ಬಿ. ವಾರದ, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ. ಚಂದ್ರಶೇಖರ್, ಪ್ರೀ-ಎ.ಎಲ್.ಟಿ.,(ಸ್ಕೌಟ್) ರವರು ಕಾರ್ಯನಿರ್ವಹಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ತಿಪ್ಪೇಸ್ವಾಮಿರವರು ಹಾಗೂ ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಮ್.ಕೆ. ಪಾರ್ಥನಳ್ಳಿರವರ ನೇತೃತ್ವದಲ್ಲಿ ಶಿಬಿರಗಳು ನಡೆದವು.



## *GONE HOME*

We record with deep regret the passing away of Smt M.G.Bopaiah, Former State Commissioner (Guides), & Former Vice-President, Bharat Scouts and Guides, Karnataka & National Hedquarters, New Delhi and Trustee of Karnataka State Bharat Scouts and Guides, Karnataka on 15th August 2014 at Mercara after brief-illness. She was aged about 97 Years. She leaves behind Two Sons, One Daughter, Grand Children and large number of relatives and admirers.

She served as District Commissioner (Guides) of Kodagu District Association, Assistant State Commissioner (Guides) of Mysore Division and as State Commissioner (Guides) Karnataka from the year 1999 to 2006. She was the Vice-President of Bharat Scouts and Guides, Karnataka State from the year 2006 to 2011. She was Member of National Council of Bharat Scouts and Guides, India for nearly 15 years.

She was presently a Trustee of the Karnataka State Bharat Scouts and Guides, Karnataka. She had earlier served as Member of the Karnataka State Social Welfare Advisory Board, Bangalore.

She was Awarded the distinguished Silver Elephant Award of the Bharat Scouts and Guides and Rajyotsava Award by Government of Karnataka during the year 2007. She was very closely connected with number of Social Service organisations of Kodagu District for several years.

We Pray God Almighty to give necessary courage & Strength to the family members to bear this irreparable loss.

**MAY HER SOUL REST IN PEACE.**

**STATE SECRETARY**



## ಶ್ರದ್ಧಾಂಜಲಿ

ಮೈಸೂರು ಜಿಲ್ಲಾ ಸಂಸ್ಥೆಯ ಸ್ಥಾನಿಕ ಆಯುಕ್ತ(ಸ್ಕೌಟ್ಸ್) ಆಗಿ ಸಲ್ಲಿಸುತ್ತಿದ್ದ ಶ್ರೀ ಜಿಎನ್. ಚನ್ನಬಸಪ್ಪ ರವರು ತಮ್ಮ 84ನೇ ವಯಸ್ಸಿನಲ್ಲಿ ದಿನಾಂಕ 13-07-2014 ರಂದು ಮೈಸೂರಿನಲ್ಲಿ ನಿಧನ ಹೊಂದಿದರು. ಶ್ರೀಯುತರು ಜಿಲ್ಲಾ ಸಂಸ್ಥೆಯ ಟ್ರಸ್ಟ್‌ನ ಖಜಾಂಚಿಯಾಗಿಯೂ, ಬೇಡನ್ ಪೋವೆಲ್ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ಶಿಕ್ಷಣ ಇಲಾಖೆಯಲ್ಲಿ ಶಿಕ್ಷಣಾಧಿಕಾರಿಯಾಗಿ ನಿವೃತ್ತಿ ಹೊಂದಿದ ಶ್ರೀಯುತರು ಶಿಕ್ಷಣ ಕ್ಷೇತ್ರದಲ್ಲಿ ವಿವಿಧ ಸ್ತರಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

ಶ್ರೀಯುತರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ಮತ್ತು ಅವರ ನಿಧನದಿಂದ ಉಂಟಾದ ದುಃಖವನ್ನು ಭರಿಸಲು ಅವರ ಕುಟುಂಬ ವರ್ಗದವರಿಗೆ ಶಕ್ತಿ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ರಾಜ್ಯ ಕಾರ್ಯದರ್ಶಿ

............... ಹಿಂದಿನ ಸಂಚಿಕೆಯಿಂದ

ಅಧ್ಯಾಯ – 4 ಶಿಬಿರಾಗ್ನಿ ಉದಂತ ಸಂ–11

# ಮಾರ್ಗ ಶೋಧನೆ

## (TRACKING)

## ಕುರುಹುಗಳ ಅವಲೋಕನ

### ಕುರುಹುಗಳನ್ನು ಗಮನಿಸುವುದು – ಜನರ ವಿವರಗಳು – ಶವದ ಸುತ್ತಲಿನ ಕುರುಹುಗಳು – ಹಳ್ಳಿಗಾಡು ಪ್ರದೇಶದ ವಿವರಗಳು – ಸ್ಕೌಟುಗಳು ತಮ್ಮ ಕಣ್ಣು, ಕಿವಿ ಮತ್ತು ಮೂಗುಗಳನ್ನುಪಯೋಗಿಸುವುದು – ರಾತ್ರಿಯ ವೇಳೆಯ ಸ್ಕೌಟಿಂಗ್

**ಜನರ ವಿವರಗಳು :**

ನೀವು ಬಸ್ಸು ಅಥವಾ ರೈಲಿನಲ್ಲಿ ಪ್ರಯಾಣ ಮಾಡುವಾಗ, ನಿಮ್ಮ ಸಹಪ್ರಯಾಣಿಕರ ಬಗ್ಗೆ ಸೂಕ್ಷ್ಮವಾಗಿ ಗಮನಿಸಿ, ಅವರ ಮುಖಚರ್ಯೆ, ಉಡಿಗೆ – ತೊಡಿಗೆ, ಮಾತನಾಡುವ ರೀತಿ ಇತ್ಯಾದಿಗಳನ್ನು ಗಮನಿಸಿ. ಆ ಬಳಿಕ ಅದರ ಬಗ್ಗೆ, ನೀವು ವಿಶದವಾಗಿ ವಿವರಿಸಲು ಬರುತ್ತದೆ. ಅವರ ತೋರಿಕೆ ಮತ್ತು ನಡವಳಿಕೆಗಳಿಂದ, ಅವರು ಸ್ಥಿತಿವಂತರೋ? ಬಡವರೋ? (ಸಾಮಾನ್ಯವಾಗಿ ಅವರ ಪಾದರಕ್ಷೆಯನ್ನು ನೋಡಿ, ಈ ಅಂಶವನ್ನು ಹೇಳಬಹುದು.) ಅವರ ಉದ್ಯೋಗ ವ್ಯವಹಾರಗಳೇನು? ಎಂಬುವುಗಳನ್ನು ಹೇಳಬಹುದು. ಅವರಿಗೇನಾದರೂ ಸಹಾಯ ಬೇಕಾಗಿದೆಯೇ ಎಂಬುದನ್ನೂ ಕಂಡುಕೊಳ್ಳಬಹುದು.

ಇದನ್ನು ಮಾಡುವಾಗ ನೀವು ಅವರನ್ನು ಗಮನಿಸುತ್ತಿದ್ದೀರೆಂಬ ಸುಳಿವು ಅವರಿಗೆ ಸಿಗಬಾರದು. ಹಾಗೇನಾದರೂ ಆದರೆ ಅವರು ಹುಷಾರಾಗಿಬಿಡುತ್ತಾರೆ. 2ನೆಯ ಉದಂತದಲ್ಲಿ ನಾನು ಕುರುಬ ಬಾಲಕನ ಬಗ್ಗೆ ಹೇಳಿರುವುದನ್ನು ನೆನೆಸಿಕೊಳ್ಳಿ, ಅಲೆಮಾರಿಯ ಬೂಟುಗಳನ್ನು ಗಮನಿಸಿದರೂ ಅವನ ಕಡೆ ನೋಡದಿದ್ದುದರಿಂದ, ಆ ಅಲೆಮಾರಿಗೆ, ಇವನ ಬಗ್ಗೆ ಅನುಮಾನ ಬರಲಿಲ್ಲವೆಂದು ತಿಳಿಸಿರುವುದನ್ನೂ ನೆನೆಸಿಕೊಳ್ಳಿ.

ಈ ರೀತಿಯಾಗಿ ಜನರನ್ನು ಸೂಕ್ಷ್ಮವಾಗಿ ಗಮನಿಸಿ, ಅವರ ನಡತೆ, ಯೋಚನಾ ಲಹರಿ, ಶಕ್ತಿ, ಸಾಮರ್ಥ್ಯಗಳ ಬಗ್ಗೆ ಅಂದಾಜು ಮಾಡಬಹುದು.

ಇದು ವಿಶೇಷವಾಗಿ ವ್ಯಾಪಾರ ಮತ್ತು ವಾಣಿಜ್ಯೋದ್ಯಮದಲ್ಲಿ ಬಹಳ ಸಹಾಯಕವಾಗುತ್ತದೆ. ಅಂಗಡಿ ಸಹಾಯಕ / ಮಾರಾಟಗಾರರು ವಿಶ್ವಾಸಾರ್ಹರೋ ? ದಗಾಕೋರರೋ ? ಎಂಬುದನ್ನು ತಿಳಿಯಲು ಸುಲಭವಾಗುತ್ತದೆ.

ಒಬ್ಬ ವ್ಯಕ್ತಿಯು ಹ್ಯಾಟ್ ಧರಿಸುವುದನ್ನು ಆಧರಿಸಿ ಅವನ ನಡತೆಯನ್ನು ಹೇಳಬಹುದು ಎಂದು ಹೇಳುತ್ತಾರೆ.

| | |
|---|---|
| ಸ್ವಲ್ಪ ಪಕ್ಕಕ್ಕಿದ್ದರೆ | ವ್ಯಕ್ತಿಯು ಒಳ್ಳೆಯ ಸ್ವಭಾವದವನು |
| ಪೂರಾ ಪಕ್ಕಕ್ಕಿದ್ದರೆ | ಅವನು ಜಂಭದ ಕೋಳಿ |

| | |
|---|---|
| ಹಿಂಭಾಗಕ್ಕಿದ್ದರೆ | ಅವನು ಸಾಲವನ್ನು ಸರಿಯಾಗಿ ಹಿಂದಿರುಗಿಸುವುದಿಲ್ಲ |
| ಮೇಲೆ ನೇರವಾಗಿದ್ದರೆ | ಅವನ ಪ್ರಾಮಾಣಿಕ ಆದರೆ ಬುದ್ಧಿಹೀನ. |



ಟೋಪಿ ಅಥವಾ ಪೇಟವನ್ನು ಧರಿಸುವುದರ ಆಧಾರದ ಮೇಲೆ, ಅವರ ಗುಣವನ್ನು ಹೇಳಬಲ್ಲಿರಾ ?

ಒಬ್ಬ ವ್ಯಕ್ತಿಯು (ಹೆಂಗಸಾಗಲಿ, ಗಂಡಸಾಗಲಿ) ನಡೆಯುವ ರೀತಿಯು, ಆ ವ್ಯಕ್ತಿಯ ನಡತೆಯ ದರ್ಪಣವೆನ್ನಬಹುದು.

ಜಂಭದ ಕೋಳಿ – ಪುಟ್ಟ ಪುಟ್ಟ ಹೆಜ್ಜೆಯಿಡುತ್ತಾ, ಗಡಿಬಿಡಿಯಿಂದ, ಹೆಚ್ಚಾಗಿ ಕೈಬೀಸಿ ನಡೆಯುವ ವ್ಯಕ್ತಿ.

ಕ್ಷೋಭೆಗೊಂಡವರು – ಅವಸವಸರವಾಗಿ ಜಗ್ಗಿ ನಡೆಯುವ ನಡಿಗೆ.

ಕೆಲಸವಿಲ್ಲದೆ ಅಲೆಯುವವನು – ನಿಧಾನದ ಜೋಲು ನಡಿಗೆ.

ಸ್ಕೌಟುಗಳು – ಸುಗಮವಾದ, ಚುರುಕಾದ ನಿಶ್ಶಬ್ಧ ನಡಿಗೆ

ಇವುಗಳನ್ನು ಗಮನಿಸಿ, ಮನನ ಮಾಡಿಕೊಳ್ಳಿ.

## ಅವಲೋಕನೆಯನ್ನು ಅಭ್ಯಾಸ ಮಾಡಿಕೊಳ್ಳಿ :

ವ್ಯಕ್ತಿಗಳನ್ನು ಗಮನಿಸಲು, ಸ್ವಲ್ಪಮಟ್ಟಿಗೆ ಅಭ್ಯಾಸ ಮಾಡಿದರಾಯಿತು. ಧರಿಸಿರುವ ಉಡಿಗೆ ತೊಡಿಗೆಗಳ ಆಧಾರದ ಮೇಲೆ ಅವನ ನಡತೆಯನ್ನು ಬಹಳಮಟ್ಟಿಗೆ ಕರಾರುವಾಕ್ಕಾಗಿ ಹೇಳಬಹುದು.

ಸಾಮಾನ್ಯವಾಗಿ, ಪಾದರಕ್ಷೆಗಳು ಎಲ್ಲಕ್ಕಿಂತಲೂ ಮುಖ್ಯವಾದ ಅಂಶವೆಂದು ಹೇಳಬಹುದು.

ಸ್ವಲ್ಪದಿನಗಳ ಹಿಂದೆ ಗ್ರಾಮಾಂತರ ಪ್ರದೇಶದಲ್ಲಿ ಒಬ್ಬ ಮಹಿಳೆಯೊಡನೆ ಹೋಗುತ್ತಿದ್ದೆ. ನಮ್ಮ ಮುಂದೆ ಒಬ್ಬ ಹರೆಯದ ವಯಸ್ಸಿನ ಮಹಿಳೆಯು ಹೋಗುತ್ತಿದ್ದಳು.

"ಮುಂದೆ ಹೋಗುತ್ತಿರುವ ಅವಳು ಯಾರಿರಬಹುದು? ಆಶ್ಚರ್ಯಕರವಾಗಿದೆ" ಎಂದು ನನ್ನ ಗೆಳತಿ ಹೇಳಿದಳು. "ಅವಳು ಯಾರ ಮನೆಯ ಕೆಲಸದವಳೆಂದು ತಿಳಿದರೆ, ಅವಳು ಯಾರೆಂದು ತಿಳಿಯುತ್ತದೆ, ಅಷ್ಟೆ" ಎಂದೆ, ನಾನು.

ಆ ಹುಡುಗಿಯು ಒಳ್ಳೆಯ ಬಟ್ಟೆಗಳನ್ನು ಧರಿಸಿದ್ದಳು. ಆಕೆಯ ಪಾದರಕ್ಷೆಗಳನ್ನು ನೋಡಿದ ಕೂಡಲೇ "ಅವಳು ಧರಿಸಿರುವ ಬಟ್ಟೆಗಳು ಬೇರೆಯವರವು. ಅವಳಿಗೆ ಅವನ್ನು ಕೊಟ್ಟಿರಬೇಕು. ಅವಳು ತನಗೆ ಸರಿಹೋಗುವಂತೆ ದುರಸ್ತು ಮಾಡಿಕೊಂಡಿರಬೇಕು. ಹಿತಕರವಾದುದರಿಂದ ತನ್ನವೇ ಪಾದರಕ್ಷೆಗಳನ್ನು ಧರಿಸಿರುತ್ತಾಳೆ". ಎಂದು ನಾನು

ಅಂದುಕೊಂಡೆ, ನಾವು ಇಳಿದುಕೊಂಡಿದ್ದ ಮನೆಯವರೆಗೆ ಅವಳೂ ಹೋದಳು. ಅಲ್ಲಿಂದ ಅವಳು ಆಳುಗಳ ಮನೆಗಳ ಕಡೆ ಹೋದಳು. ಅವಳು ಅವರಲ್ಲೊಬ್ಬ ಕೆಲಸದಾಳೆಂದು ಆಗ ತಿಳಿಯಿತು.

ಬಡತನದಲ್ಲಿದ್ದ ಹೆಂಗಸಿಗೆ ಸಹಾಯ ಮಾಡಲು ನನಗೊಮ್ಮೆ ಅವಕಾಶವು ದೊರಕಿತು. ನಾನು ನಡೆದುಕೊಂಡು ಹೋಗುತ್ತಿದ್ದಾಗ, ಆಕೆಯು ನನ್ನ ಮುಂದೆ ನಡೆದುಕೊಂಡು ಹೋಗುತ್ತಿದ್ದಳು. ಆಕೆಯ ಬಟ್ಟೆಗಳೇನೋ ಚೆನ್ನಾಗಿಯೇ ಇದ್ದುವು. ಆದರೆ ಆಕೆಯು ಧರಿಸಿದ್ದ ಪಾದರಕ್ಷೆಯ ತಳಭಾಗವು ಕೊನೆಯ ಹಂತದಲ್ಲಿದ್ದು, ರಿಪೇರಿ ಮಾಡುವ ಸ್ಥಿತಿಯಲ್ಲಿರಲಿಲ್ಲ. ಗಮನಿಸಿಯೇ ಆಕೆಯ ಬಡತನವನ್ನು ಊಹಿಸಿದೆ. ಆಕೆಯು ಸಹಾಯ ಪಡೆಯುವ ಸ್ಥಿತಿಯಲ್ಲಿರುವಳೆಂದು ನಾನು ಸರಿಯಾಗಿ ಊಹೆ ಮಾಡಿದ್ದು, ಆಕೆಗೆ ತಿಳಿಯದೆಂದು ಭಾವಿಸುತ್ತೇನೆ.

ರೈಲು ಅಥವಾ ಬಸ್‌ನಲ್ಲಿ ಪ್ರಯಾಣಮಾಡುವಾಗ, ಇತರರನ್ನು ಗಮನಿಸುವುದು ಸ್ವಾರಸ್ಯಕರ ಅಭ್ಯಾಸವಾಗಿದೆ. ಅವರ ಕಾಲುಗಳನ್ನೇ ಗಮನಿಸಿ. ಅಲ್ಲಿಂದ ಮೇಲೆ ನೋಡದೆ, ಅವರು ಎಂತಹವರೆಂದು ಹೇಳುವುದು–ಯುವಜನರೇ? ವಯಸ್ಕರೇ? ಬಡವರೇ? ಬಲ್ಲಿದರೆ? ಸ್ಥೂಲ ಕಾಯರೇ? ಕೃಶ ದೇಹಿಗಳೇ ? ಇತ್ಯಾದಿ ಹೇಳುವುದು ಸ್ವಾರಸ್ಯವಲ್ಲದೆ ಮತ್ತೇನು? ಊಹಿಸಿದ್ದಾದ ಮೇಲೆ, ನಿಮ್ಮ ಊಹೆಯು ಸರಿಯೇ ತಪ್ಪೇ? ಎಂಬುದನ್ನು ಮೇಲೆ ನೋಡಿ ಕಂಡುಕೊಳ್ಳಿ.

ಇತ್ತೀಚಿನ ದಿನಗಳಲ್ಲಿ ಒಂದು ದಿನ, ನಾನೊಬ್ಬ ಬೇಹುಗಾರನೊಂದಿಗೆ ಮಾತನಾಡುತ್ತಿದ್ದೆ, ನಾವು ಒಬ್ಬ ವ್ಯಕ್ತಿಯ ನಡವಳಿಕೆಯ ಬಗ್ಗೆ ಚರ್ಚಿಸುತ್ತಿದ್ದೆವು.

"ಏನೇ ಆದರೂ, ಅವನೊಬ್ಬ ಮೀನುಗಾರ" ಎಂದು ನಾನು ಟೀಕೆ ಮಾಡಿದೆ. ನನ್ನ ಸಂಗಾತಿಯು ಅದು ಹೇಗೆಂದು ಹೇಳಲಾರದಾದ. ಏಕೆಂದರೆ ಅವನೆಂದೂ ಮೀನು ಹಿಡಿದವನಲ್ಲ.

***ಕೋಮಲಪಾದ–ಟಾಮಿ ನಂ. 7 ಮಾರ್ಗದರ್ಶಿ***
***ಟಾಮಿ ಯಾವ ಕಡೆ ತಿರುಗಬೇಕೋ ಅದನು ನಾ ಹೇಳಲಾರೆ***
***ಮಿತ್ರನೋ, ಶತ್ರುವೋ, ಯಾವ ಗುರುತನೂ ನಾ ಕಾಣಲಾರೆ***

ಅವನ ಕೋಟಿನ ಎಡಮಣಿ ಕಟ್ಟಿಗೆ, ತುಂಬಾ ಬಟ್ಟೆಯ ಚೂರುಗಳು, ಕುಚ್ಚು ಕುಚ್ಚಾಗಿ, ಮೆತ್ತಿಕೊಂಡಿರುವುದನ್ನು ನಾನು ಗಮನಿಸಿದೆ. ಬಹಳ ಜನ ಬೆಸ್ತರು, ನೊಣಗಳನ್ನು ಗಾಳಗಳಿಂದ ತೆಗೆದು ಟೋಪಿಯಲ್ಲಿಯೋ, ಷರ್ಟಿನ ತೋಳಿಗೋ ಸಿಕ್ಕಿಸಿಕೊಳ್ಳುತ್ತಾರೆ. ಒಣಗಿದ ಮೇಲೆ, ಮತ್ತೆ ಉಪಯೋಗಿಸಲು ಅವುಗಳನ್ನು ತೆಗೆಯುವಾಗ, ಬಟ್ಟೆಯಿಂದ ದಾರವು ಕಿತ್ತುಬರುತ್ತದೆ.

ಷರ್ಲಾಕ್ ಹೋಮ್ಸ್ ನೆನಪಿರಬಹುದು. ಅವನು ಒಬ್ಬ ಅಪರಿಚಿತನನ್ನು ಭೇಟಿ ಮಾಡುತ್ತಾನೆ. ಆ ಅಪರಿಚಿತನು ಸಂಭಾವಿತನಂತೆ ಕಂಡುಬರುತ್ತಾನೆ. ಹೊಸ ಬಟ್ಟೆಗಳನ್ನು ತೊಟ್ಟು ತೋಳಿನ ಮೇಲೆ ಶೋಕ ಸೂಚಕ ಪಟ್ಟಿಯನ್ನು ಧರಿಸಿರುತ್ತಾನೆ. ಅವನಲ್ಲಿ ಸೈನಿಕನ ಠೀವಿಯನ್ನೂ, ನಾವಿಕನ ರೀತಿಯ ನಡಿಗೆಯನ್ನೂ ಷರ್ಲಾಕ್ ಹೋಮ್ಸ್ ಗಮನಿಸುತ್ತಾನೆ. ಅವನ ಕೈಗಳ ಮೇಲೆ ಹಚ್ಚೆ ಹೊಯ್ದ ಗುರುತುಗಳಿವೆ. ಬಿಸಿಲಿಗೆ, ಮೈ, ಕಂದು ಬಣ್ಣಕ್ಕೆ ತಿರುಗಿದೆ. ಆ ಅಪರಿಚಿತನನ್ನು ನೀವು ಯಾರೆಂದು ಊಹೆ ಮಾಡುತ್ತಿದ್ದೀರಿ ? ಷರ್ಲಾಕ್ ಹೋಮ್ಸ್‌ನೇನೋ ಸರಿಯಾಗಿ ಊಹಿಸಿದ. "ಆ ವ್ಯಕ್ತಿಯು ಇತ್ತೀಚಿಗೆ ರಾಯಲ್ ನೇವಿಯಿಂದ ನಿವೃತ್ತಿಹೊಂದಿದ ಸಾರ್ಜೆಂಟ್. ಅವನ ಹೆಂಡತಿಯು ಸತ್ತಿದ್ದಾಳೆ. ಅವನಿಗೆ ಮನೆಯಲ್ಲಿ ಕೆಲವು ಸಣ್ಣ ಮಕ್ಕಳಿವೆ" ಎಂದು ಊಹಿಸಿದ.

.....ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227






"We have got to make this world a better and happier place and each of you can do that. Your Law and Promise is to help other people at all times. The world needs you"

***- Olave, Lady Baden -Powell***

**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



ದಿ. 15-08-2014ರಂದು ಕೊಪ್ಪಳದ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ಪ್ರಥಮ ಸ್ಥಾನ ಪಡೆದ ಟ್ರಿನಿಟಿ ಪಬ್ಲಿಕ್ ಶಾಲೆಯ ಸ್ಕೌಟ್‌ಗಳೊಡನೆ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಸಣ್ಣ ನೀರಾವರಿ ಸಚಿವರಾದ ಮಾನ್ಯ ಶ್ರೀ ಶಿವರಾಜ್ ತಂಗಡಗಿ, ಶಾಸಕರಾದ ಶ್ರೀ ರಾಘವೇಂದ್ರ ಹಿಟ್ನಾಳ್, ಜಿಲ್ಲಾ ಪಂಚಾಯತ್ ಸಿ.ಇ.ಓ ಮತ್ತು ಇತರರರನ್ನು ಕಾಣಬಹುದು.



ದಿ. 15-08-2014ರಂದು ಹಾವೇರಿ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ಪ್ರಥಮ ಸ್ಥಾನ ಪಡೆದ ಕೆ.ಎಲ್.ಇ. ಪ್ರೌಢಶಾಲೆಯ ಗೈಡ್‌ಗಳೊಡನೆ ಮಾನ್ಯ ಕೃಷಿ ಸಚಿವರಾದ ಶ್ರೀ ಕೃಷ್ಣ ಭೈರೇಗೌಡ, ಶಾಸಕರಾದ ಶ್ರೀ ರುದ್ರಪ್ಪ ಲಮಾಣಿ, ವಿಧಾನ ಪರಿಷತ್ ಸದಸ್ಯರಾದ ಶ್ರೀ ಶ್ರೀನಿವಾಸ ಮಾನೆ ಹಾಗೂ ಇತರರನ್ನು ಕಾಣಬಹುದು.



ದಿನಾಂಕ 15-08-2014ರಂದು ಬೀದರ್‌ನ ನೆಹರು ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಸಚಿವರಾದ ಮಾನ್ಯ ಶ್ರೀಮತಿ ಉಮಾಶ್ರೀರವರು ಸ್ಕೌಟ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು.



ದಿನಾಂಕ 15-08-2014ರಂದು ಬಿಜಾಪುರ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಸಂಚಲನದಲ್ಲಿ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಬೃಹತ್ ಮತ್ತು ಮಧ್ಯಮ ನೀರಾವರಿ ಇಲಾಖೆಗಳ ಸಚಿವರಾದ ಮಾನ್ಯ ಶ್ರೀ ಎಂ.ಬಿ. ಪಾಟೀಲ್ ಅವರು ಸ್ಕೌಟ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು.



ದಿ. 26-7-2014 ರಿಂದ 01-08-2014 ರವರೆಗೆ ಶ್ರೀ ಮುರುಘಾಮಠ ಚಿತ್ರದುರ್ಗದಲ್ಲಿ ಜರುಗಿದ ಮೂಲ ತರಬೇತಿ ಶಿಬಿರಗಳನ್ನು ಡಾ|| ಶಿವಮೂರ್ತಿ ಮುರುಘಾಶರಣರು ಸಸಿಗೆ ನೀರೆರೆಯುವುದರ ಮೂಲಕ ಉದ್ಘಾಟಿಸಿದರು. ಜಿಲ್ಲಾ ಪದಾಧಿಕಾರಿಗಳನ್ನು ಹಾಗೂ ಶಿಬಿರದ ಸಿಬ್ಬಂದಿಯನ್ನು ಚಿತ್ರದಲ್ಲಿ ಕಾಣಬಹುದು.



ದಿ. 14-08-2014ರಂದು ರಾಯಚೂರು ಜಿಲ್ಲಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡ ಶ್ರೀ ಶಶಿಕಾಂತ್ ಸೆಂಥಿಲ್, ಭಾ.ಆ.ಸೇ ಇವರನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ ಮತ್ತು ಇತರ ಜಿಲ್ಲಾ ಪದಾಧಿಕಾರಿಗಳು ಆತ್ಮೀಯವಾಗಿ ಬರಮಾಡಿಕೊಂಡರು.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Licensed to post whout prepayment License No.: WPP-87.
Posted at: Mail Business Centre, Bangalore GPO on 25, 28 & 30 of every month (No. of Pages : 4+28=32)



ದಿ. 15-08-2014ರಂದು ರಾಜ್ಯ ಕೇಂದ್ರ ಕಛೇರಿ ಆವರಣದಲ್ಲಿ ಜರುಗಿದ ಸ್ವಾತಂತ್ರ್ಯೋತ್ಸವ ದಿನಾಚರಣೆ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಅವರು ರಾಷ್ಟ್ರ ಧ್ವಜವನ್ನು ಅರಳಿಸಿದರು. ಸ್ಕೌಟ್-ಗೈಡ್‌ಗಳು ಮತ್ತು ಪೋಷಕರು ಚಿತ್ರದಲ್ಲಿದ್ದಾರೆ.



ದಿ. 6-8-2014ರಂದು ಮೈಸೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ಮುಖ್ಯೋಪಾಧ್ಯಾಯರುಗಳ ಸಾಮಾನ್ಯ ಮಾಹಿತಿ ಶಿಬಿರವನ್ನು ಶ್ರೀ ಎಚ್.ಆರ್. ಬಸಪ್ಪ, ಉಪನಿರ್ದೇಶಕರು(ಆಡಳಿತ) ಸಾ.ಶಿ.ಇ, ಉದ್ಘಾಟಿಸಿದರು. ಶ್ರೀ ಸಿ. ಮರಿಯಪ್ಪ, ಜಿಲ್ಲಾ ದೈ.ಶಿ. ಅಧೀಕ್ಷರು ಸಾ.ಶಿ.ಇ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ದಿ. 15-8-2014ರಂದು ಹಾಸನ ಜಿಲ್ಲೆ ಅರಸೀಕೆರೆ ಜೇನುಕಲ್ ಕ್ರೀಡಾಂಗಣದಲ್ಲಿ ನಡೆದ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಸಮಾರಂಭದಲ್ಲಿ ನಿವೃತ್ತ ಶಿಕ್ಷಕ ಹಾಗೂ ಸ್ಕೌಟ್ ಮಾಸ್ಟರ್ ಶ್ರೀ ಜಿ.ಕೆ. ಗಂಗಾಧರ್ ಮತ್ತು ಸ್ಥ.ಸಂ. ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾ ಮಹೇಶ್ವರವರನ್ನು ಸನ್ಮಾನಿಸಲಾಯಿತು. ಶಾಸಕರಾದ ಶ್ರೀ ಶಿವಲಿಂಗೇ ಗೌಡರು ಹಾಗೂ ಇತರರು ಚಿತ್ರದಲ್ಲಿದ್ದಾರೆ.



ಇತ್ತೀಚೆಗೆ ಬಳ್ಳಾರಿ ಜಿಲ್ಲಾಧಿಕಾರಿಯಾಗಿ ಅಧಿಕಾರವಹಿಸಿಕೊಂಡ ಶ್ರೀ ಸಮೀರ್ ಶುಕ್ಲ, ಭಾ.ಆ.ಸೇ ಇವರನ್ನು ಜಿಲ್ಲಾ ಪದಾಧಿಕಾರಿಗಳು ಭೇಟಿ ಮಾಡಿ ಶುಭ ಹಾರೈಸಿದರು.



ಇತ್ತೀಚೆಗೆ ಡಾ. ಆನಿ ಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಜರುಗಿದ ರೋವರ್‌ಗಳ ಸಮುದಾಯ ಸೇವಾ ಶಿಬಿರದಲ್ಲಿ ಕಾರ್ಯನಿರತರಾಗಿರುವ ರೋವರ್‌ಗಳು.



ದಾವಣಗೆರೆಯಲ್ಲಿ ಜರುಗಿದ ರಕ್ಷಾ ಬಂಧನ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್-ಗೈಡ್‌ಗಳು.





SCOUTS
Creating a Better World

If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002.    Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**